# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 548(681) |
| ಸದಸ್ಯರ ಹೆಸರು | : | ಶ್ರೀ ಅರವಿಂದ ಕುಮಾರ್ ಅರಳಿ (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 22-02-2022 |
| ಉತ್ತರಿಸುವ ಸಚಿವರು | : | ಪೌರಾಡಳಿತ, ಸಣ್ಣ ಕೈಗಾರಿಕೆಗಳು ಹಾಗೂ ಸಾರ್ವಜನಿಕ ವಲಯ ಉದ್ಯಮಗಳ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ್ ನಗರಕ್ಕೆ ಅಮೃತ ನಗರೋತ್ಥಾನ-4 ರ ಯೋಜನೆ ಅಡಿಯಲ್ಲಿ ಎಷ್ಟು ಅನುದಾನ ಮಂಜೂರಾತಿ ನೀಡಲಾಗಿದೆ; ಇದಕ್ಕಾಗಿ ಅಳವಡಿಸಿದ ನಿಯಮಾವಳಿಗಳೇನು; (ವಿವರ ನೀಡುವುದು) | ಮುಖ್ಯಮಂತ್ರಿಗಳ ಅಮೃತ ನಗರೋತ್ಥಾನ ಹಂತ-4 ಯೋಜನೆಯಡಿಯಲ್ಲಿ ಬೀದರ ನಗರಸಭೆಗೆ ರೂ.40.00 ಕೋಟಿಗಳ ಅನುದಾನ ಹಂಚಿಕೆ ಮಾಡಲಾಗಿರುತ್ತದೆ.<br>ಮಾರ್ಗಸೂಚಿಗಳ ವಿವರವನ್ನು **ಅನುಬಂಧ** ದಲ್ಲಿ ನೀಡಿದೆ. |
| ಆ) | ಕಡಿಮೆ ಅನುದಾನ ನೀಡಿದ್ದಲ್ಲಿ ನಗರದ ಅಭಿವೃದ್ಧಿ ಮಾಡಲು ಸಾಧ್ಯವೇ; ಅಗತ್ಯಗನುಗುಣವಾಗಿ ಅನುದಾನ ಬಿಡುಗಡೆ ಮಾಡಲಾಗುವುದೇ; | ಮುಖ್ಯಮಂತ್ರಿಗಳ ಅಮೃತ ನಗರೋತ್ಥಾನ ಹಂತ-4 ಯೋಜನೆ ಅಲ್ಲದೇ ಸರ್ಕಾರದ ವಿವಿಧ ಯೋಜನೆಗಳಾದ ನಗರೋತ್ಥಾನ ಹಂತ-3, ಎಸ್.ಎಫ್.ಸಿ., 14 ನೇ ಹಣಕಾಸು, 15 ನೇ ಹಣಕಾಸು ಹಾಗೂ ಇನ್ನಿತರ ಯೋಜನೆಗಳಲ್ಲಿ ಅಭಿವೃದ್ಧಿ ಕಾಮಗಾರಿಗಳಿಗೆ ಸರ್ಕಾರದಿಂದ ಅನುದಾನ ಬಿಡುಗಡೆಯಾಗುತ್ತಿದ್ದು, ಸದರಿ ಮೊತ್ತದಿಂದ ಅವಶ್ಯಕ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗುತ್ತಿದೆ. |
| ಇ) | ಇದಕ್ಕಾಗಿ ನೇಮಿಸಿದ ಸಮಿತಿಯಲ್ಲಿ ಸ್ಥಳೀಯ ಶಾಸಕರು ಸದಸ್ಯರಾಗಿರುತ್ತಾರೆಂದು ಉಲ್ಲೇಖಿಸಲಾಗಿದೆ; ಸ್ಥಳೀಯ ಶಾಸಕರು ಎಂದರೆ ಯಾರು; ಈ ಸಮಿತಿಗೆ ವಿಧಾನ ಪರಿಷತ್ ಸದಸ್ಯರನ್ನು ಸದಸ್ಯರೆಂದು ಪರಿಗಣಿಸಲಾಗಿದೆಯೇ; (ಮಾಹಿತಿ ನೀಡುವುದು) | ಸ್ಥಳೀಯ ಶಾಸಕರು ಎಂದರೆ ಆಯಾ ನಗರ ಸ್ಥಳೀಯ ಸಂಸ್ಥೆಯ ವ್ಯಾಪ್ತಿಯ ವಿಧಾನಸಭಾ ಸದಸ್ಯರಾಗಿರುತ್ತಾರೆ. ಈ ಸಮಿತಿಗೆ ವಿಧಾನ ಪರಿಷತ್ ಸದಸ್ಯರನ್ನು ಸದಸ್ಯರೆಂದು ಪರಿಗಣಿಸಿರುವುದಿಲ್ಲ. |

ಸಂಖ್ಯೆ:ನಅಇ 39 ಸಿಎಸ್‌ಎಸ್ 2022

**(ಎನ್. ನಾಗರಾಜು (ಎಂ.ಟಿ.ಬಿ))**
ಪೌರಾಡಳಿತ, ಸಣ್ಣ ಕೈಗಾರಿಕೆಗಳು ಹಾಗೂ
ಸಾರ್ವಜನಿಕ ವಲಯ ಉದ್ಯಮಗಳ ಸಚಿವರು

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ರಾಜ್ಯದ ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ (ನಗರಸಭೆ, ಪುರಸಭೆ ಮತ್ತು ಪಟ್ಟಣ ಪಂಚಾಯತಿಗಳು) ಮುಖ್ಯಮಂತ್ರಿಗಳ ಅಮೃತ ನಗರೋತ್ಥಾನ (ಮುನಿಸಿಪಾಲಿಟಿ) ಯೋಜನೆ (ಹಂತ-4) ಯನ್ನು ಅನುಷ್ಠಾನಗೊಳಿಸುವ ಬಗ್ಗೆ.

ಓದಲಾಗಿದೆ: ಪೌರಾಡಳಿತ ನಿರ್ದೇಶನಾಲಯದಿಂದ ಸ್ವೀಕೃತವಾಗಿರುವ ಪ್ರಸ್ತಾವನೆ.

**********

ಪ್ರಸ್ತಾವನೆ:

ಕರ್ನಾಟಕದ ಒಟ್ಟು ಜನಸಂಖ್ಯೆ 61.13 ದಶ ಲಕ್ಷದಲ್ಲಿ (2011 ರ ಜನಗಣತಿಯ ಪ್ರಕಾರ) ಸುಮಾರು 23.6 ದಶಲಕ್ಷ ಜನಸಂಖ್ಯೆ ನಗರ ಪ್ರದೇಶಗಳಲ್ಲಿ ವಾಸಿಸುತ್ತಿದ್ದಾರೆ. ಅಂದರೆ ಒಟ್ಟು ಜನಸಂಖ್ಯೆಯಲ್ಲಿ ಶೇಕಡ 38.57 ಜನಸಂಖ್ಯೆಯು ನಗರ ಪ್ರದೇಶಗಳಲ್ಲಿ ವಾಸಿಸುತ್ತಿದ್ದಾರೆ. ತೀವ್ರ ವೇಗದ ನಗರೀಕರಣ ಎಲ್ಲಾ ನಗರಗಳು/ ಪಟ್ಟಣಗಳಲ್ಲಿ ಮೂಲಭೂತ ಸೌಲಭ್ಯಗಳ ಕೊರತೆಯನ್ನು ಉಂಟುಮಾಡಿದೆ. ಮೂಲಭೂತ ಸೌಲಭ್ಯಗಳ ಕೊರತೆಯನ್ನು ನೀಗಿಸಲು ಸಣ್ಣ ಮತ್ತು ಮಧ್ಯಮ ಪಟ್ಟಣಗಳ ಸಮಗ್ರ ಅಭಿವೃದ್ಧಿ ಮೇಲೆ ಕೇಂದ್ರೀಕರಿಸಲು ರಾಜ್ಯ ಸರ್ಕಾರವು ಈ ಪಟ್ಟಣಗಳಲ್ಲಿ ಪೌರಸೇವೆಗಳನ್ನು ಮೇಲ್ದರ್ಜೆಗೇರಿಸುವುದು ಮತ್ತು ವಿಸ್ತರಿಸುವುದು ಅವಶ್ಯಕವೆಂದು ಭಾವಿಸಿ, ವಿವಿಧ ಕ್ಷೇತ್ರಗಳಲ್ಲಿ ಮೂಲಭೂತ ಸೌಲಭ್ಯಗಳ ಮೇಲ್ದರ್ಜೆ ಮತ್ತು ನಾಗರೀಕರಿಗೆ ಸೇವೆಗಳನ್ನು ತಲುಪಿಸುವ ಬಗ್ಗೆ ಸುಧಾರಣೆಗಳು ಅತ್ಯಗತ್ಯವಾಗಿರುವುದರಿಂದ ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಸೇವಾಮಟ್ಟದ ಮಾನದಂಡಗಳನ್ವಯ ಕಾರ್ಯಕ್ರಮವನ್ನು ತೆಗೆದುಕೊಳ್ಳಲಾಗಿದೆ. ಈ ಉದ್ದೇಶವನ್ನು ಸಾಧಿಸುವ ಸಲುವಾಗಿ ಮುಖ್ಯಮಂತ್ರಿಗಳ ಸಣ್ಣ ಮತ್ತು ಮಧ್ಯಮ ಪಟ್ಟಣಗಳ ಅಭಿವೃದ್ಧಿ ಕಾರ್ಯಕ್ರಮ (ಸಿಎಂಎಸ್‌ಎಂಟಿಡಿಪಿ) ಮೊದಲನೇ, ಎರಡನೇ ಹಂತದ ಯೋಜನೆಗಳನ್ನು ಮತ್ತು ನಗರೋತ್ಥಾನ (ಮುನಿಸಿಪಾಲಿಟಿ)-3 ಯೋಜನೆಯನ್ನು ಕ್ರಮವಾಗಿ 2009-10, 2012-13 ಮತ್ತು 2016-17ನೇ ಸಾಲಿನಲ್ಲಿ ಅನುಷ್ಠಾನಕ್ಕೆ ತರಲಾಯಿತು.

ರಾಜ್ಯದ 10 ಮಹಾನಗರಪಾಲಿಕೆಗಳಲ್ಲಿ ಅನುಷ್ಠಾನಗೊಳಿಸಲಾಗುತ್ತಿರುವ ಮಹಾತ್ಮ ಗಾಂಧಿನಗರ ವಿಕಾಸ ಯೋಜನೆ (ಮಹಾನಗರಪಾಲಿಕೆಗಳು) ಮಾದರಿಯಂತೆ ನಗರ ಸ್ಥಳೀಯ ಸಂಸ್ಥೆಗಳನ್ನು ಅಭಿವೃದ್ಧಿಪಡಿಸಲು ಮುಖ್ಯಮಂತ್ರಿಗಳ ಅಮೃತ ನಗರೋತ್ಥಾನ (ಮುನಿಸಿಪಾಲಿಟಿ) ಯೋಜನೆ (ಹಂತ-4)ಯನ್ನು ಅನುಷ್ಠಾನಗೊಳಿಸಲು ಉದ್ದೇಶಿಸಲಾಗಿದೆ. ಸದರಿ ಮುಖ್ಯಮಂತ್ರಿಗಳ ಅಮೃತ ನಗರೋತ್ಥಾನ (ಮುನಿಸಿಪಾಲಿಟಿ) ಯೋಜನೆ (ಹಂತ-4)ಯನ್ನು ಹಾಲಿ ಇರುವ ನಗರ ಸ್ಥಳೀಯ ಸಂಸ್ಥೆಗಳು, ಮೇಲ್ದರ್ಜೆಗೇರಿಸಿರುವ ನಗರ ಸ್ಥಳೀಯ ಸಂಸ್ಥೆಗಳು ಹಾಗೂ ಹೊಸದಾಗಿ ಸೃಜಿಸಲಾಗಿರುವ ಸ್ಥಳೀಯ ಸಂಸ್ಥೆಗಳಲ್ಲಿ ಕೈಗೆತ್ತಿಕೊಳ್ಳಲು ರೂ.3885.00 ಕೋಟಿಗಳ ಪ್ರಸ್ತಾವನೆಯನ್ನು ನಗರೋತ್ಥಾನ (ಮುನಿಸಿಪಾಲಿಟಿ)-3ನೇ ಹಂತದ ಯೋಜನೆಯಂತೆ, ಮುಖ್ಯಮಂತ್ರಿಗಳ ಅಮೃತ ನಗರೋತ್ಥಾನ (ಮುನಿಸಿಪಾಲಿಟಿ) ಯೋಜನೆ (ಹಂತ-4)ಗೂ ಸಹ ಪ್ರಸ್ತಾಪಿಸಲಾಗಿದೆ.

ಮೇಲ್ಕಂಡ ಹಿನ್ನೆಲೆಯಲ್ಲಿ **ಮುಖ್ಯಮಂತ್ರಿಗಳ ಅಮೃತ ನಗರೋತ್ಥಾನ (ಮುನಿಸಿಪಾಲಿಟಿ) ಯೋಜನೆ (ಹಂತ-4)**ಯನ್ನು ಅನುಷ್ಠಾನಗೊಳಿಸುವ ಸಂಬಂಧ, ಮಾರ್ಗಸೂಚಿಗಳನ್ನು ನಿಗದಿಪಡಿಸಲು ಉದ್ದೇಶಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

## ಸರ್ಕಾರದ ಆದೇಶ ಸಂಖ್ಯೆ : ನಅಇ 124 ಸಮಸ 2021, ಬೆಂಗಳೂರು, ದಿನಾಂಕ:14-01-2022

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮುಖ್ಯಮಂತ್ರಿಗಳ ಅಮೃತ ನಗರೋತ್ಥಾನ (ಮುನಿಸಿಪಾಲಿಟಿ) ಯೋಜನೆ (ಹಂತ-4)ಯನ್ನು 2022-23 ರಿಂದ 2024-25ನೇ ಸಾಲಿನವರೆಗೆ ಅನುಷ್ಠಾನಗೊಳಿಸುವ ಸಂಬಂಧ, ಈ ಕೆಳಕಂಡಂತೆ ಮಾರ್ಗಸೂಚಿಗಳನ್ನು ನಿಗದಿಪಡಿಸಲಾಗಿದೆ.

ನಗರ ಸ್ಥಳೀಯ ಸಂಸ್ಥೆವಾರು ಹಂಚಿಕೆ ಮಾಡಿರುವ ಮೊತ್ತವನ್ನು ಈ ಕೆಳಕಂಡಂತೆ ನಿಗಧಿಪಡಿಸಲಾಗಿದೆ (ನಗರ ಸ್ಥಳೀಯ ಸಂಸ್ಥೆಗಳ ವಿವರಗಳನ್ನು ಅನುಬಂಧ-1ರಲ್ಲಿ ಲಗತ್ತಿಸಿದೆ).

**ಕೋಷ್ಟಕ-1**

(ರೂ.ಕೋಟಿಗಳಲ್ಲಿ)

| ಕ್ರ. ಸಂ. | ವರ್ಗ | ನಗರ ಸ್ಥಳೀಯ ಸಂಸ್ಥೆಗಳಸಂಖ್ಯೆ | ಅಮೃತ ನಗರೋತ್ಥಾನ (ಮುನಿಸಿಪಾಲಿಟಿ) ಯೋಜನೆಗೆ ಪ್ರಸ್ತಾಪಿಸಿರುವ ಹಂಚಿಕೆ | |
|---|---|---|---|---|
| | | | ಹಂಚಿಕೆ | ಮೊತ್ತ |
| 1 | ಜಿಲ್ಲಾ ಕೇಂದ್ರದ ನಗರಸಭೆಗಳು ಮತ್ತು ಗ್ರೇಡ್-1 ನಗರಸಭೆಗಳು **(ಅನುಪಾತ ಸರ್ಕಾರ : ಸಾಲ = 60 : 40)** | 23 | 40.00 | 920.00 |
| 2 | ಇನ್ನುಳಿದ ಎಲ್ಲಾ ನಗರಸಭೆಗಳು **(ಅನುಪಾತ ಸರ್ಕಾರ : ಸಾಲ = 60 : 40)** | 38 | 30.00 | 1140.00 |
| 3 | ಪುರಸಭೆಗಳು **(ಅನುಪಾತ ಸರ್ಕಾರ : ಸಾಲ = 60 : 40)** | 124 | 10.00 | 1240.00 |
| 4 | ಪಟ್ಟಣ ಪಂಚಾಯಿತಿಗಳು **(ಅನುಪಾತ ಸರ್ಕಾರ : ಸಾಲ = 60 : 40)** | 117 | 5.00 | 585.00 |
| ಒಟ್ಟು | | **302** | | **3885.00** |

## ಮುಖ್ಯ ಮಂತ್ರಿಗಳ ಅಮೃತ ನಗರೋತ್ಥಾನ (ಮುನಿಸಿಪಾಲಿಟಿ) ಯೋಜನೆ (ಹಂತ-4) ಯನ್ನು ಅನುಷ್ಠಾನಗೊಳಿಸುವಾಗ ಪಾಲಿಸಬೇಕಾದ ಮಾನದಂಡಗಳು.

**1)** ನಗರ ಸ್ಥಳೀಯ ಸಂಸ್ಥೆಯ ಪರವಾಗಿ ರಾಜ್ಯ ಸರ್ಕಾರವು ಕೆ.ಯು.ಐ.ಡಿ.ಎಫ್.ಸಿ ಹಾಗೂ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ವತಿಯಿಂದ ಹಲವು ನೀರು ಸರಬರಾಜು ಮತ್ತು ಒಳಚರಂಡಿ ಯೋಜನೆಗಳನ್ನು ಕೈಗೆತ್ತಿಕೊಂಡಿದೆ. ಈ ಯೋಜನೆಗಳಡಿ ನಗರ ಸ್ಥಳೀಯ ಸಂಸ್ಥೆಯ ಪಾಲು ಶೇ.5 ರಿಂದ ಶೇ.15 ರಷ್ಟು ಇದ್ದು, ನಗರ ಸ್ಥಳೀಯ ಸಂಸ್ಥೆಗಳು ತಮ್ಮ ಪಾಲನ್ನು ಹಲವು ವರ್ಷಗಳಿಂದ ನೀಡದೇ ಇರುವುದರಿಂದ, ಸದರಿ ಯೋಜನೆಗಳ ಪ್ರಗತಿಯು ಕುಂಠಿತವಾಗಿರುತ್ತದೆ. ಆದುದರಿಂದ, ಮುಖ್ಯಮಂತ್ರಿಗಳ ಅಮೃತ ನಗರೋತ್ಥಾನ (ಮುನಿಸಿಪಾಲಿಟಿ) ಯೋಜನೆ (ಹಂತ-4)ಯಲ್ಲಿ ಒದಗಿಸಿರುವ ಅನುದಾನದಲ್ಲಿ ಮೊದಲನೆಯ ಪ್ರಾಶಸ್ತ್ಯತೆಯನ್ನು ಕೆ.ಯು.ಐ.ಡಿ.ಎಫ್.ಸಿ ಹಾಗೂ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ವತಿಯಿಂದ

ಕೈಗೊಂಡಿರುವ ಯೋಜನೆಗಳಿಗೆ ನಗರ ಸ್ಥಳೀಯ ಸಂಸ್ಥೆಗಳ ವಂತಿಕೆ ಇದ್ದಲ್ಲಿ ಅದಕ್ಕೆ ಕಡ್ಡಾಯವಾಗಿ ಮೀಸಲಿಡತಕ್ಕದ್ದು.

2) ಮುಖ್ಯಮಂತ್ರಿಗಳ ಅಮೃತ ನಗರೋತ್ಥಾನ (ಮುನಿಸಿಪಾಲಿಟಿ) ಯೋಜನೆ (ಹಂತ-4)ಯಲ್ಲಿ ಒದಗಿಸಿರುವ ಅನುದಾನದಲ್ಲಿ ಭೂ ಸ್ವಾಧೀನ ಮೊತ್ತವನ್ನು ಭರಿಸಲು ಅವಕಾಶ ನೀಡದೇ ಸದರಿ ಭೂಸ್ವಾಧೀನ ವೆಚ್ಚವನ್ನು ನಗರ ಸ್ಥಳೀಯ ಸಂಸ್ಥೆಗಳ ಸ್ವಂತ ಸಂಪನ್ಮೂಲದಿಂದ ಭರಿಸತಕ್ಕದ್ದು.

3) ಮುಖ್ಯಮಂತ್ರಿಗಳ ಅಮೃತ ನಗರೋತ್ಥಾನ (ಮುನಿಸಿಪಾಲಿಟಿ) ಯೋಜನೆ (ಹಂತ-4)ಗೆ ನಿಗದಿಪಡಿಸಿರುವ ಒಟ್ಟು ರೂ.3885.00 ಕೋಟಿ ಮೊತ್ತದಲ್ಲಿ ಶೇಕಡ 2 ರಷ್ಟು ಅನುದಾನವನ್ನು ಅಂದರೆ ರೂ.77.7 ಕೋಟಿಗಳನ್ನು Project Management Consultant (ಪಿ.ಎಂ.ಸಿ) ಮತ್ತು ನಗರೋತ್ಥಾನ ಕೋಶದ ವೆಚ್ಚಗಳಿಗೆ ನಿಗದಿಪಡಿಸಲು ಉದ್ದೇಶಿಸಲಾಗಿರುತ್ತದೆ.

ನಗರ ಸ್ಥಳೀಯ ಸಂಸ್ಥೆಯು ತನ್ನ ಸಾಮರ್ಥ್ಯದ ಮೇಲೆ ಈ ಯೋಜನೆಯನ್ನು ಹಾಗೂ ಯೋಜನೆಯ ರೂಪುರೇಷೆಯನ್ನು ತನ್ನ ಹಂತದಲ್ಲೇ ತಯಾರಿಸಿ, ಅನುಷ್ಠಾನಗೊಳಿಸಿದ್ದಲ್ಲಿ, ಅಥವಾ ಲೋಕೋಪಯೋಗಿ ಇಲಾಖೆಯ ವತಿಯಿಂದ ಯೋಜನೆಯ ರೂಪುರೇಷೆಯನ್ನು ತಯಾರಿಸಿ, ಅನುಷ್ಠಾನಗೊಳಿಸಿದ್ದಲ್ಲಿ ಮೇಲೆ ಸೂಚಿಸಿರುವ ಶೇ.2ರಷ್ಟು ಉಳಿತಾಯವಾಗುವ ಅನುದಾನವನ್ನು ಇದೇ ಕಾರ್ಯಕ್ರಮದಡಿಯಲ್ಲಿ ತಯಾರಿಸುವ ಕ್ರಿಯಾಯೋಜನೆಯಲ್ಲಿ ಸೇರಿಸಿಕೊಂಡು ಹೆಚ್ಚುವರಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸತಕ್ಕದ್ದು.

4) ಮೇಲಿನ ಒಟ್ಟು ಹಂಚಿಕೆ ಮೊತ್ತ ರೂ.3885.00 ಕೋಟಿಗಳಲ್ಲಿ ಸರ್ಕಾರವು ಶೇ.60ರಷ್ಟು ಹಂಚಿಕೆಯನ್ನು ಅನುದಾನದ ರೂಪದಲ್ಲಿ ಮತ್ತು ಉಳಿದ ಶೇ.40ರಷ್ಟು ಹಂಚಿಕೆಯನ್ನು ಕೆ.ಯು.ಐ.ಡಿ.ಎಫ್.ಸಿ.ಯ Karnataka Water and Sanitation Pooled Fund Trustನ ವತಿಯಿಂದ ಸಾಲದ ಮುಖಾಂತರ ಭರಿಸಿ 2022-23ನೇ ಸಾಲಿನಿಂದ 2024-25ನೇ ಸಾಲಿನ ಅವಧಿಯಲ್ಲಿ ಅನುಷ್ಠಾನಗೊಳಿಸಲು ಅನುಮೋದನೆ ನೀಡಿದೆ.

5) ಮುಖ್ಯಮಂತ್ರಿಗಳ ಅಮೃತ ನಗರೋತ್ಥಾನ (ಮುನಿಸಿಪಾಲಿಟಿ) ಯೋಜನೆ(ಹಂತ-4) ಯಡಿಯಲ್ಲಿ ಒದಗಿಸಿರುವ ಅನುದಾನದಲ್ಲಿ ಮೊದಲಿಗೆ ಅಮೃತ್-2, ಸ್ವಚ್ಛ ಭಾರತ್ ಮಿಷನ್-2 ಹಾಗೂ ಇನ್ನಿತರೇ ಕೇಂದ್ರ ಸರ್ಕಾರದ ಯೋಜನೆಯಡಿಯಲ್ಲಿ ಅನುಷ್ಠಾನಗೊಳಿಸುತ್ತಿರುವ ಕಾಮಗಾರಿಗಳಿಗೆ ನಗರ ಸ್ಥಳೀಯ ಸಂಸ್ಥೆಗಳ ವಂತಿಕೆ ಇದ್ದಲ್ಲಿ, ಅದನ್ನು ಮೀಸಲಿಡತಕ್ಕದ್ದು.

6) **<u>ಕುಡಿಯುವ ನೀರು ಒಳಚರಂಡಿ ಕಾಮಗಾರಿಗಳು:-</u>**

i) ಕುಡಿಯುವ ನೀರಿನ ಕಾಮಗಾರಿಗಳನ್ನು ಪ್ರಥಮ ಆದ್ಯತೆ ಮೇರೆಗೆ ಪರಿಗಣಿಸುವುದು. ಸೇವಾ ಮಟ್ಟದ ಮಾನದಂಡದಂತೆ ಪ್ರತಿ ವ್ಯಕ್ತಿಗೆ 135 ಎಲ್‌ಪಿಸಿಡಿ ನೀರು ಮತ್ತು ಶೇಕಡ100 ರಷ್ಟು ನಗರ ವ್ಯಾಪ್ತಿಯನ್ನು ಆವರಿಸುವಂತೆ ನೀರು ಸರಬರಾಜು ಮಾಡಲು ಕಾಮಗಾರಿಗಳನ್ನು ಕೈಗೊಳ್ಳುವುದು.

ii) ಕೇಂದ್ರ ಸರ್ಕಾರದ ಅನುದಾನದಡಿ ಕುಡಿಯುವ ನೀರು ಮತ್ತು ಒಳಚರಂಡಿ ಕಾಮಗಾರಿಗಳಿಗೆ ನೀಡಬೇಕಾದ ಸ್ಥಳೀಯ ಸಂಸ್ಥೆಯ ವಂತಿಕೆಯ ಪೂರ್ಣ ಮೊತ್ತವನ್ನು ಲಭ್ಯವಿರುವ ಮುಖ್ಯಮಂತ್ರಿಗಳ ಅಮೃತ ನಗರೋತ್ಥಾನ (ಮುನಿಸಿಪಾಲಿಟಿ) ಯೋಜನೆ (ಹಂತ-4)ಯ ಅನುದಾನದಡಿ ಭರಿಸುವುದು.

iii) ಕುಡಿಯುವ ನೀರಿನ ಯೋಜನೆಗಳನ್ನು ಅನುಷ್ಠಾನಗೊಳಿಸುವಲ್ಲಿ, 24/7 ನೀರು ಸರಬರಾಜು ಯೋಜನೆಗಳನ್ನು ಅನುಷ್ಠಾನಗೊಳಿಸಲು ಇರುವಂತಹ ಮಾನದಂಡಗಳು ಹಾಗೂ ವಿಶಿಷ್ಟ ವಿವರಣೆಗಳನ್ನು ಕಡ್ಡಾಯವಾಗಿ ಅಳವಡಿಸತಕ್ಕದ್ದು.

iv) ಕುಡಿಯುವ ನೀರಿಗೆ ಸಂಬಂಧಪಟ್ಟ ಕಾಮಗಾರಿಗಳನ್ನು ತಪ್ಪದೆ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ವತಿಯಿಂದ ಮಾತ್ರ ಅನುಷ್ಠಾನಗೊಳಿಸುವುದು ಹಾಗೂ ಕಡ್ಡಾಯವಾಗಿ ಮೀಸಲಿಡಬೇಕಾದ ಅನುದಾನವನ್ನು ಮೀಸಲಿಟ್ಟ ಮೇಲೆ ಉಳಿಯುವ ಅನುದಾನದಲ್ಲಿ ಕುಡಿಯುವ ನೀರು ಮತ್ತು ಒಳಚರಂಡಿ ಕಾಮಗಾರಿಗಳಿಗೆ ಶೇ.25 ಕ್ಕಿಂತ ಹೆಚ್ಚಾಗಿ ಮೀಸಲಿಡಬಾರದು.

**6) ರಸ್ತೆ ಅಭಿವೃದ್ಧಿ ಕಾಮಗಾರಿಗಳು:-**

i) ರಸ್ತೆ ಅಭಿವೃದ್ಧಿ ಕಾಮಗಾರಿ, ರಸ್ತೆ ಬದಿ ಚರಂಡಿ ನಿರ್ಮಾಣ ಕಾಮಗಾರಿ, ಫುಟ್‌ಪಾತ್ ಟ್ರಾಫಿಕ್ ಮ್ಯಾನೇಜ್‌ಮೆಂಟ್ ಅಂದರೆ, ರಸ್ತೆ ಸೂಚನಾ ಫಲಕ, ಮಾಹಿತಿ ಫಲಕ ಹಾಗೂ ಇನ್ನಿತರೇ ಟ್ರಾಫಿಕ್‌ಗೆ ಸಂಬಂಧಪಟ್ಟ ಅಭಿವೃದ್ಧಿ ಕಾಮಗಾರಿಗಳು.

ii) ಸಿ.ಸಿ. ರಸ್ತೆಗಳಾಗಿದ್ದಲ್ಲಿ, ಉಪಯುಕ್ತತಾ ಕಾರಿಡಾರ್ (utility Carridor) ನಿರ್ಮಿಸುವುದು ಕಡ್ಡಾಯವಾಗಿರುತ್ತದೆ. ತೆಗೆದುಕೊಳ್ಳಲಾಗುವ ರಸ್ತೆಗಳೊಂದಿಗೆ ಚರಂಡಿ ಹಾಗೂ ಫುಟ್‌ಪಾತ್‌ಗಳ ಅಭಿವೃದ್ಧಿ ಕೈಗೊಳ್ಳತಕ್ಕದ್ದು.

iii) ಕಡ್ಡಾಯವಾಗಿ ಮೀಸಲಿಡಬೇಕಾದ ಅನುದಾನವನ್ನು ಮೀಸಲಿಟ್ಟ ಮೇಲೆ ಉಳಿಯುವ ಅನುದಾನದಲ್ಲಿ ರಸ್ತೆ ಅಭಿವೃದ್ಧಿ ಕಾಮಗಾರಿಗಳನ್ನು ಶೆ.70% ಗಿಂತ ಹೆಚ್ಚಾಗಿ ಮೀಸಲಿಡಬಾರದು.

iv) ನಗರ ಸ್ಥಳೀಯ ಸಂಸ್ಥೆಗಳಲ್ಲಿ ಒಳಚರಂಡಿ ಕಾಮಗಾರಿಗಳನ್ನು ಮಾಡದೆ ಇರುವ ರಸ್ತೆಗಳಲ್ಲಿ ಕಾಂಕ್ರೀಟ್ ರಸ್ತೆ ಕಾಮಗಾರಿಗಳನ್ನು ತೆಗೆದುಕೊಳ್ಳುವಂತಿಲ್ಲ.

**7) ಮಳೆ ನೀರು ಚರಂಡಿ ಅಭಿವೃದ್ಧಿ ಕಾಮಗಾರಿಗಳು:-**

ಮಳೆ ನೀರು ಚರಂಡಿ ಅಭಿವೃದ್ಧಿ ಕಾಮಗಾರಿಗಳು ಹಾಗೂ ಜಿಲ್ಲಾ ವಿಪತ್ತು ನಿರ್ವಹಣಾ ಯೋಜನೆಯನ್ವಯ ಪ್ರವಾಹ ಉಂಟಾಗುವ ಪ್ರದೇಶಗಳನ್ನು ಗುರುತಿಸಿ ಮಳೆ ನೀರು ಚರಂಡಿಗಳನ್ನು ಕಡ್ಡಾಯವಾಗಿ ತೆಗೆದುಕೊಳ್ಳತಕ್ಕದ್ದು.

**8) ಇತರೆ ಅಭಿವೃದ್ಧಿ ಕಾಮಗಾರಿಗಳು:-**

ಮೇಲೆ ತಿಳಿಸಿರುವ ಕಾಮಗಾರಿಗಳ ಹಂಚಿಕೆಯನ್ನು ಹೊರತುಪಡಿಸಿ ಉಳಿದ ಹಂಚಿಕೆ ಮೊತ್ತದಲ್ಲಿ ಕಛೇರಿ ಕಟ್ಟಡ ನಿರ್ಮಾಣ, ಸಮುದಾಯ ಮತ್ತು ಸಾರ್ವಜನಿಕ ಶೌಚಾಲಯ ನಿರ್ಮಾಣ, ಆಧುನಿಕ ಬಸ್ ನಿಲ್ದಾಣ ನಿರ್ಮಾಣ, ಮಾರುಕಟ್ಟೆ ಸಂಕೀರ್ಣ ನಿರ್ಮಾಣ, ಬೀದಿ ದೀಪ ಕಾಮಗಾರಿಗಳು, ಗ್ರಂಥಾಲಯ ಕಟ್ಟಡ ನಿರ್ಮಾಣ, ಅಂಗನವಾಡಿ ಕಟ್ಟಡ ನಿರ್ಮಾಣ ಉದ್ಯಾನವನ ಮತ್ತು ಆಟದ ಮೈದಾನದ ಕಾಮಗಾರಿಗಳನ್ನು ಕ್ರಿಯಾಯೋಜನೆಯಲ್ಲಿ ಸೇರ್ಪಡೆ ಮಾಡಲು ಅವಕಾಶ ಕಲ್ಪಿಸಿದೆ.

9) ಈ ಯೋಜನೆಯಡಿಯಲ್ಲಿ ನಗರ ಸ್ಥಳೀಯ ಸಂಸ್ಥೆಗಳಿಗೆ ಒದಗಿಸಿದ ಒಟ್ಟು ಮೊತ್ತದಲ್ಲಿ ಪರಿಶಿಷ್ಟ ಜಾತಿ / ಗಿರಿಜನ ಉಪಯೋಜನೆಗಳಿಗೆ ಶೇ.24.10ರಷ್ಟು ಮೊತ್ತದ ಪ್ರತ್ಯೇಕ ಕ್ರಿಯಾಯೋಜನೆಯನ್ನು ಪರಿಶಿಷ್ಟ ಜಾತಿ / ಗಿರಿಜನ ಹೆಚ್ಚಾಗಿ ವಾಸಿಸುತ್ತಿರುವ ಪ್ರದೇಶಗಳಲ್ಲಿ ಮೂಲಭೂತ ಸೌಕರ್ಯಗಳನ್ನು ಅಭಿವೃದ್ಧಿಪಡಿಸಲು ಮೀಸಲಿಡಬೇಕು ಹಾಗೂ ಪ್ರಸ್ತುತ ಚಾಲ್ತಿಯಲ್ಲಿರುವ ಸಮಾಜ ಕಲ್ಯಾಣ ಇಲಾಖೆಯ ಸುತ್ತೋಲೆಯಂತೆ ಕ್ರಮವಹಿಸುವುದು.

10) ಈ ಯೋಜನೆಯಡಿಯಲ್ಲಿ ನಗರ ಸ್ಥಳೀಯ ಸಂಸ್ಥೆಗಳಿಗೆ ಒದಗಿಸಿದ ಒಟ್ಟು ಮೊತ್ತದಲ್ಲಿ ಶೇ.5ರಷ್ಟು ಅನುದಾನವನ್ನು ಅಂಗವಿಕಲರ ಕಲ್ಯಾಣಕ್ಕಾಗಿ ಹಾಗೂ ಶೇ.7.25 ರಷ್ಟು ಅನುದಾನವನ್ನು ಇತರೇ ಬಡ ಜನರ ಕಲ್ಯಾಣಕ್ಕಾಗಿ ಸೃಜಿಸುವ ಮೂಲಭೂತ ಸೌಕರ್ಯಗಳಿಗಾಗಿ ಮೀಸಲಿಡಬೇಕು (ಸರ್ಕಾರದ ಸುತ್ತೋಲೆ ಸಂಖ್ಯೆ:ನಅಇ/ 25/ ಪಿಎನ್‌ಜಿ/ 2018, ದಿನಾಂಕ:07-06-2019 ಮತ್ತು ಸುತ್ತೋಲೆ ಸಂಖ್ಯೆ:ನಅಇ/ 23/ ಪಿಎನ್‌ಜಿ/ 2018, ದಿನಾಂಕ:03-06-2019 ರಲ್ಲಿ ತಿಳಿಸಿರುವಂತೆ ಕ್ರಮವಹಿಸತಕ್ಕದ್ದು).

**11)** ನಗರ ಸ್ಥಳೀಯ ಸಂಸ್ಥೆಗಳು ಈಗಾಗಲೇ ಇತರೇ ಸರ್ಕಾರಿ ಇಲಾಖೆ ಹಾಗೂ ಸರ್ಕಾರಿ ಸಂಸ್ಥೆಗಳೊಂದಿಗೆ ಮೂಲಭೂತ ಸೌಕರ್ಯ ಅಭಿವೃದ್ಧಿ ಅಥವಾ ಯಾವುದಾದರು ಇತರೇ ಯೋಜನೆಗಳನ್ನು ರೂಪಿಸಿಕೊಂಡಿದ್ದು, ಆ ಯೋಜನೆಗಳಿಗೆ ನಗರ ಸ್ಥಳೀಯ ಸಂಸ್ಥೆಗಳ ವಂತಿಕೆಯನ್ನು ಕೊಡುವುದಾಗಿ, ಆ ಸಂಸ್ಥೆಯೊಂದಿಗೆ ಒಡಂಬಡಿಕೆ ಮಾಡಿಕೊಂಡಿದ್ದಲ್ಲಿ, ಅದಕ್ಕಾಗಿ ಬೇಕಾಗಿರುವಂತಹ ವಂತಿಕೆಯನ್ನು ಮೀಸಲಿಡತಕ್ಕದ್ದು.

**12)** ಈ ಯೋಜನೆಯಡಿಯಲ್ಲಿ ನಗರ ಸ್ಥಳೀಯ ಸಂಸ್ಥೆಗಳಿಗೆ ಒದಗಿಸಿದ ಒಟ್ಟು ಅನುದಾನದಲ್ಲಿ ಶೇಕಡ 5 ರಷ್ಟು ಅಂದರೆ ರೂ.194.25 ಕೋಟಿ ಮೊತ್ತವನ್ನು ತೀವ್ರ ಮೂಲಭೂತ ಸೌಕರ್ಯ ಕೊರತೆ ಎದುರಿಸುತ್ತಿರುವ ನಗರ ಸ್ಥಳೀಯ ಸಂಸ್ಥೆಗಳ ಮೂಲಭೂತ ಸೌಕರ್ಯ ಅಭಿವೃದ್ಧಿಗಾಗಿ, ಪೌರಾಡಳಿತ ಸಚಿವರ ವಿವೇಚನೆಗನುಗುಣವಾಗಿ ಹಾಗೂ ಪೌರಾಡಳಿತ ಸಚಿವರ ಅನುಮೋದನೆಯೊಂದಿಗೆ ಪೌರಾಡಳಿತ ಸಚಿವರ ವಿಶೇಷ ಅನುದಾನವೆಂದು ಭಾವಿಸಿ ಅನುಷ್ಠಾನಗೊಳಿಸತಕ್ಕದ್ದು (ಪೌರಾಡಳಿತ ಸಚಿವರ ವಿವೇಚನೆಗನುಗುಣವಾಗಿ ಬಿಡುಗಡೆಗೊಳಿಸುವ ಅನುದಾನವನ್ನು ಆಯಾ ಜಿಲ್ಲೆಗಳ ವ್ಯಾಪ್ತಿಯಲ್ಲಿ ಬರುವ ಯಾವುದೇ ನಗರ ಸ್ಥಳೀಯ ಸಂಸ್ಥೆಗಳ ಅಭಿವೃದ್ಧಿ ಕಾಮಗಾರಿಗಳಿಗಾಗಿ ಮಾತ್ರ ಉಪಯೋಗಿಸಿಕೊಳ್ಳತಕ್ಕದ್ದು. ಆಯಾ ಜಿಲ್ಲೆಗಳಿಗೆ ಹಂಚಿಕೆಯಾಗುವ ಪೌರಾಡಳಿತ ಸಚಿವರ ವಿವೇಚನೆಗನುಗುಣವಾಗಿ ಬಿಡುಗಡೆಗೊಳಿಸುವ ಅನುದಾನವನ್ನು ಬೇರೆ ಜಿಲ್ಲೆಗಳ ನಗರ ಸ್ಥಳೀಯ ಸಂಸ್ಥೆಗಳಿಗೆ ವರ್ಗಾಯಿಸುವಂತಿಲ್ಲ /ಬಳಸುವಂತಿಲ್ಲ).

**13)** ಮುಖ್ಯಮಂತ್ರಿಗಳ ಅಮೃತ ನಗರೋತ್ಥಾನ (ಮುನಿಸಿಪಾಲಿಟಿ) ಯೋಜನೆ (ಹಂತ-4)ಯ ಅನುದಾನ ಮತ್ತು ಸಾಲದ ಮೊತ್ತವನ್ನು ಜಿಲ್ಲಾ ನಗರಾಭಿವೃದ್ಧಿ ಕೋಶದ ಕಾರ್ಯಪಾಲಕ ಅಭಿಯಂತರರುಗಳಿಗೆ Authorisation ಮೂಲಕ ಬಿಡುಗಡೆಮಾಡಲಾಗುವುದು. ಕಾರ್ಯಪಾಲಕ ಅಭಿಯಂತರರು ಯೋಜನೆಯನ್ನು ಅನುಷ್ಠಾನಗೊಳಿಸಿ ಹಣ ಬಳಕೆ ಪ್ರಮಾಣಪತ್ರ ಮತ್ತು ಯೋಜನೆಯ ಮುಕ್ತಾಯ ಪ್ರಮಾಣ ಪತ್ರಗಳನ್ನು ಜಿಲ್ಲಾಧಿಕಾರಿಗಳಿಂದ ಅನುಮೋದನೆ ಪಡೆದು ಸಲ್ಲಿಸಲು ಜವಾಬ್ದಾರರಾಗಿರುತ್ತಾರೆ.

**14)** ಜಿಲ್ಲಾಧಿಕಾರಿಗಳು ಪ್ರತಿ ತಿಂಗಳಿಗೊಮ್ಮೆ ಯೋಜನೆಯ ಬಗ್ಗೆ ಪ್ರಗತಿ ಪರಿಶೀಲನೆ ಮಾಡಿ ವರದಿಯನ್ನು ಪೌರಾಡಳಿತ ನಿರ್ದೇಶನಾಲಯಕ್ಕೆ ಸಲ್ಲಿಸುವುದು.

**15) <u>ಕ್ರಿಯಾಯೋಜನೆ ಅನುಮೋದನೆ:</u>**

ಮುಖ್ಯಮಂತ್ರಿಗಳ ಅಮೃತ ನಗರೋತ್ಥಾನ (ಮುನಿಸಿಪಾಲಿಟಿ) ಯೋಜನೆ (ಹಂತ-4)ಯ ಅಡಿಯಲ್ಲಿ ನಗರ ಸ್ಥಳೀಯ ಸಂಸ್ಥೆಗೆ ನಿಗದಿಪಡಿಸಲಾದ ಹಂಚಿಕೆಯಲ್ಲಿ ಶೇಕಡ 85 ರಷ್ಟು ಅನುದಾನಕ್ಕೆ ಕ್ರಿಯಾಯೋಜನೆಯನ್ನು ತಯಾರಿಸುವುದು. ಶೇಕಡ 2 ರಷ್ಟು ಹಂಚಿಕೆ ಮೊತ್ತವನ್ನು ಪಿಎಂಸಿ ಮತ್ತು ನಗರೋತ್ಥಾನ ಕೋಶದ ವೆಚ್ಚಕ್ಕೆ ಮೀಸಲಿರಿಸುವುದು. ಉಳಿದ ಶೇಕಡ 13 ರಷ್ಟು ಹಂಚಿಕೆಯನ್ನು ನಗರ ಸ್ಥಳೀಯ ಸಂಸ್ಥೆಗಳು ಸಾಧಿಸಲಾಗುವ ಸುಧಾರಣೆಗಳನ್ನು ಆಧರಿಸಿ, ನಿಗದಿತ ಸಮಯದಲ್ಲಿ ಉತ್ತಮ ಸಾಧನೆ ಮಾಡಿದ ನಗರ ಸ್ಥಳೀಯ ಸಂಸ್ಥೆಗಳಿಗೆ ಕ್ರಮ ಸಂಖ್ಯೆ 30 ರಲ್ಲಿ ವಿವರಿಸಿರುವಂತೆ ಮೊತ್ತವನ್ನು ಬಿಡುಗಡೆ ಮಾಡಲು ಕ್ರಮವಹಿಸಲಾಗುತ್ತದೆ.

ಜಿಲ್ಲಾಧಿಕಾರಿಗಳು ಜಿಲ್ಲೆಯ ನಗರ ಸ್ಥಳೀಯ ಸಂಸ್ಥೆಗಳ ಕ್ರಿಯಾಯೋಜನೆಯನ್ನು ಯೋಜನೆಯ ಮಾರ್ಗಸೂಚಿಗಳ ಪ್ರಕಾರ ಪರಿಶೀಲಿಸಿ, ಕ್ರೋಢೀಕರಿಸಿ ಜಿಲ್ಲಾ ಉಸ್ತುವಾರಿ ಸಚಿವರ ಅಧ್ಯಕ್ಷತೆಯಲ್ಲಿರುವ ಜಿಲ್ಲಾ ಮಟ್ಟದ ಸಮಿತಿಯ ಮುಂದೆ ಮಂಡಿಸಿ ಶಿಫಾರಸ್ಸು ಪಡೆಯುವುದು. ಜಿಲ್ಲಾಧಿಕಾರಿಗಳು ಜಿಲ್ಲಾಮಟ್ಟದ ಸಮಿತಿಯ ಶಿಫಾರಸ್ಸಿನೊಂದಿಗೆ ಪ್ರಸ್ತಾವನೆಯನ್ನು ಪೌರಾಡಳಿತ ನಿರ್ದೇಶನಾಲಯಕ್ಕೆ ಸಲ್ಲಿಸುವುದು. ಪೌರಾಡಳಿತ ನಿರ್ದೇಶನಾಲಯವು ಕ್ರಿಯಾಯೋಜನೆಯನ್ನು ಮಾರ್ಗಸೂಚಿಯಂತೆ ಪರಿಶೀಲಿಸಿ ಅನುಮೋದನೆಗಾಗಿ ರಾಜ್ಯ ಮಟ್ಟದ ಸಮಿತಿಯ ಮುಂದೆ ಮಂಡಿಸುವುದು. ರಾಜ್ಯ ಮಟ್ಟದ ಸಮಿತಿಯು ಕ್ರಿಯಾಯೋಜನೆಗೆ ಅನುಮೋದನೆ ನೀಡುವ ಪ್ರಾಧಿಕಾರವಾಗಿರುತ್ತದೆ ಹಾಗೂ ರಾಜ್ಯ ಮಟ್ಟದ ಸಮಿತಿಯ ನಿರ್ಣಯದಂತೆ ಪೌರಾಡಳಿತ ನಿರ್ದೇಶನಾಲಯವು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ ನಂತರ ಸರ್ಕಾರದಿಂದ ಆದೇಶ ಹೊರಡಿಸಲಾಗುವುದು.

**ಮುಂದುವರೆದು, ಜಿಲ್ಲಾ ಉಸ್ತುವಾರಿ ಸಚಿವರ ಅಧ್ಯಕ್ಷತೆಯಲ್ಲಿನ ಜಿಲ್ಲಾ ಮಟ್ಟದ ಸಮಿತಿಯು ಕ್ರಿಯಾ ಯೋಜನೆಯನ್ನು 15 ದಿನಗಳ ಒಳಗಾಗಿ ಅನುಮೋದಿಸುವುದು, ಜಿಲ್ಲಾ ಮಟ್ಟದ ಸಮಿತಿಯಿಂದ ಅನುಮೋದನೆಗೊಂಡ ಕ್ರಿಯಾ ಯೋಜನೆಯನ್ನು ಪೌರಾಡಳಿತ ನಿರ್ದೇಶನಾಲಯವು ಮಾರ್ಗಸೂಚಿಗಳಂತೆ ಪರಿಶೀಲಿಸಿ, 15 ದಿನಗಳ ಒಳಗಾಗಿ ರಾಜ್ಯ ಮಟ್ಟದ ಸಮಿತಿಗೆ ಶಿಫಾರಸ್ಸು ಮಾಡುವುದು ಹಾಗೂ ರಾಜ್ಯ ಮಟ್ಟದ ಸಮಿತಿಯು 15 ದಿನಗಳ ಒಳಗಾಗಿ ತಮ್ಮ ಅನುಮೋದನೆ ನೀಡುವುದು.**

ಪೌರಾಡಳಿತ ನಿರ್ದೇಶನಾಲಯ ಹಾಗೂ ರಾಜ್ಯ ಮಟ್ಟದ ಸಮಿತಿಯು 15 ದಿನಗಳೊಳಗಾಗಿ ಕ್ರಿಯಾ ಯೋಜನೆಗೆ ಶಿಫಾರಸ್ಸು/ಅನುಮೋದನೆ ನೀಡದಿದ್ದಲ್ಲಿ ಸದರಿ ಕ್ರಿಯಾ ಯೋಜನೆಗೆ ಅವುಗಳ ಒಪ್ಪಿಗೆ ಇದೆ (Deemed Approval) ಎಂದು ಭಾವಿಸತಕ್ಕದ್ದು.

16) <u>ಕಾಮಗಾರಿಗಳ ಕನಿಷ್ಠ ಗಾತ್ರ:-</u>

ಮುಖ್ಯಮಂತ್ರಿಗಳ ಅಮೃತ ನಗರೋತ್ಥಾನ (ಮುನಿಸಿಪಾಲಿಟಿ) ಯೋಜನೆ (ಹಂತ-4) ಯಡಿಯಲ್ಲಿ ನಗರಸಭೆ ವ್ಯಾಪ್ತಿಯಲ್ಲಿ ಪ್ರತಿ ಕಾಮಗಾರಿಯ ಕನಿಷ್ಠ ಮೊತ್ತವು ರೂ.100.00 ಲಕ್ಷಗಳು, ಪುರಸಭೆ ವ್ಯಾಪ್ತಿಯಲ್ಲಿ ರೂ.50.00 ಲಕ್ಷಗಳು ಹಾಗೂ ಪಟ್ಟಣ ಪಂಚಾಯಿತಿಗಳ ವ್ಯಾಪ್ತಿಯಲ್ಲಿ ರೂ. 25.00 ಲಕ್ಷಗಳಿಗೆ ಕಡಿಮೆ ಇಲ್ಲದಂತೆ ಪ್ರತಿ ಕಾಮಗಾರಿಯ ಕನಿಷ್ಠ ಮೊತ್ತವನ್ನು ನಿಗದಿಪಡಿಸಲಾಗಿದೆ.

17) <u>ಕಾಮಗಾರಿಗಳ ಪ್ಯಾಕೇಜ್ ವಿವರ</u>

i) ಮುಖ್ಯಮಂತ್ರಿಗಳ ಅಮೃತ ನಗರೋತ್ಥಾನ (ಮುನಿಸಿಪಾಲಿಟಿ) ಯೋಜನೆ (ಹಂತ-4) ಅಡಿಯಲ್ಲಿ ರಸ್ತೆ ಚರಂಡಿ, ಕುಡಿಯುವ ನೀರು ಯುಜಿಡಿ ಕಾಮಗಾರಿಗಳು ಹಾಗೂ ಕಟ್ಟಡಗಳಿಗೆ ಪ್ರತ್ಯೇಕವಾಗಿ ಜಿಲ್ಲಾವಾರು ಒಂದು ಅಥವಾ ಎರಡು ಪ್ಯಾಕೇಜ್ ಟೆಂಡರ್‌ಗಳನ್ನು ಮಾಡಲು ಅವಕಾಶ ಕಲ್ಪಿಸಲಾಗಿದೆ. ಸದರಿ ಟೆಂಡರ್‌ಗಳನ್ನು ಕಾರ್ಯಪಾಲಕ ಅಭಿಯಂತರರು, ಜಿಲ್ಲಾ ನಗರಾಭಿವೃದ್ಧಿ ಕೋಶ ಮತ್ತು ಯೋಜನಾ ಸಮಾಲೋಚಕರು (Project Management Consultants) ಗಳ ನೆರವಿನೊಂದಿಗೆ ಟೆಂಡರ್ ಕರೆಯುವುದು.

ii) ಯೋಜನೆಯ ಮಾರ್ಗಸೂಚಿಗಳನುಸಾರ ಡಿಪಿಆರ್‌ಗಳನ್ನು ಸಿದ್ಧಪಡಿಸಿ ಸಕ್ಷಮ ಪ್ರಾಧಿಕಾರಗಳಿಂದ ಆಡಳಿತಾತ್ಮಕ ಅನುಮೋದನೆ ಮತ್ತು ತಾಂತ್ರಿಕ ಮಂಜೂರಾತಿ ಪಡೆದು ನಿಯಮಾನುಸಾರ ಟೆಂಡರ್ ಕರೆಯಲು ಕ್ರಮವಹಿಸತಕ್ಕದ್ದು.

iii) ಸಂಬಂಧಿಸಿದ ಕಾರ್ಯಪಾಲಕ ಅಭಿಯಂತರರು ಜಿಲ್ಲಾವಾರು ಒಂದು ಅಥವಾ ಎರಡು ಪ್ಯಾಕೇಜ್ ಮಾಡಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮಗಳು 2000 ರಂತೆ ಇ-ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಮುಖಾಂತರ ಟೆಂಡರ್ ಕರೆಯುವುದು.

iv) ಕಾರ್ಯಪಾಲಕ ಅಭಿಯಂತರರು, ಜಿಲ್ಲಾ ನಗರಾಭಿವೃದ್ಧಿ ಕೋಶರವರು ಯೋಜನಾ ಸಮಾಲೋಚಕರ (Project Management Consultants) ನೆರವಿನಿಂದ ಸ್ವೀಕೃತವಾದ ಟೆಂಡರ್ (ತಾಂತ್ರಿಕ ಮತ್ತು ಆರ್ಥಿಕ) ಗಳನ್ನು ಮೌಲ್ಯಮಾಪನ ಮಾಡಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಇರುವ ಜಿಲ್ಲಾ ಮಟ್ಟದ ಅನುಷ್ಠಾನ ಸಮಿತಿಯ ಮುಂದೆ ಮಂಡಿಸುವುದು.

v) ಸಂಬಂಧಿಸಿದ ಕಾರ್ಯಪಾಲಕ ಅಭಿಯಂತರರು, ಜಿಲ್ಲಾ ನಗರಾಭಿವೃದ್ಧಿ ಕೋಶರವರು ಸಕ್ಷಮ ಪ್ರಾಧಿಕಾರಗಳಿಂದ ಟೆಂಡರ್ ಅನುಮೋದನೆ ಪಡೆದು ಕಾಮಗಾರಿಗಳಿಗೆ ಅರ್ಹ ಗುತ್ತಿಗೆದಾರರಿಗೆ ವಹಿಸಲು ಗುತ್ತಿಗೆ ಕರಾರು ಮಾಡಿಕೊಳ್ಳಲು ಹಾಗೂ ಕಾಮಗಾರಿಗಳ ಕಾರ್ಯಾದೇಶವನ್ನು ನೀಡುವ ಜವಾಬ್ದಾರಿಯನ್ನು ಹೊಂದಿರುತ್ತಾರೆ.

vi) ಕಾರ್ಯಪಾಲಕ ಇಂಜಿನೀಯರ್‌ರವರೇ ಕಡ್ಡಾಯವಾಗಿ ಪ್ರತಿ 15 ದಿನಗಳಿಗೊಮ್ಮೆ ಪ್ರಗತಿ ಪರಿಶೀಲನೆ ಮಾಡುವುದು.

vii) ಈ ಯೋಜನೆಯ ಎಲ್ಲಾ ಕಡತಗಳನ್ನು ನೇರವಾಗಿ ಕಾರ್ಯಪಾಲಕ ಇಂಜಿನೀಯರ್‌ರವರು ಯೋಜನಾ ನಿರ್ದೇಶಕರು, ಜಿಲ್ಲಾ ನಗರಾಭಿವೃದ್ಧಿ ಕೋಶ ರವರ ಮುಖಾಂತರ ಜಿಲ್ಲಾಧಿಕಾರಿಗಳ ಅನುಮೋದನೆಗೆ ಸಲ್ಲಿಸುವುದು.

viii) ಯೋಜನೆಯ ಅನುಷ್ಠಾನಕ್ಕೆ ಎರಡು ಸಹಾಯಕ ಇಂಜಿನಿಯರ್/ ಕಿರಿಯ ಇಂಜಿನಿಯರ್ ಹುದ್ದೆಯನ್ನು ಜಿಲ್ಲಾ ನಗರಾಭಿವೃದ್ಧಿ ಕೋಶದಲ್ಲಿ ಸೃಜಿಸಿ, ವರ್ಗಾವಣೆ ಮೇಲೆ ನಿಯೋಜಿಸುವುದು ಅಥವಾ ಗುತ್ತಿಗೆ ಆಧಾರದಲ್ಲಿ ನಿವೃತ್ತ ಅಥವಾ ನುರಿತ ಬಿ.ಇ ಅಥವಾ Diploma ಇಂಜಿನಿಯರ್‌ಗಳನ್ನು ಜಿಲ್ಲಾಧಿಕಾರಿಗಳು ನೇಮಿಸತಕ್ಕದ್ದು.

ix) ಜಿಲ್ಲಾಧಿಕಾರಿಗಳು ಕಡ್ಡಾಯವಾಗಿ ತಿಂಗಳಿಗೊಮ್ಮೆ ಪ್ರಗತಿ ಪರಿಶೀಲನೆ ಮಾಡುವುದು.

x) ಕಾಮಗಾರಿಗಳ ಬಿಲ್ಲಿನ ಲೆಕ್ಕ ಪರಿಶೀಲನೆಗೆ ಲೆಕ್ಕ ಅಧೀಕ್ಷಕರ/ ಲೆಕ್ಕಾಧಿಕಾರಿಗಳ ಹುದ್ದೆಯನ್ನು ಗುತ್ತಿಗೆ ಆಧಾರದಲ್ಲಿ ನಿವೃತ್ತ ಲೆಕ್ಕ ಅಧೀಕ್ಷಕರ/ ಲೆಕ್ಕಾಧಿಕಾರಿಗಳನ್ನು ನೇಮಿಸುವುದು ಅಥವಾ ರಾಜ್ಯ ಲೆಕ್ಕ ಪತ್ರ ಇಲಾಖೆ (State Accounts Department) ಯಿಂದ ನಿಯೋಜನೆ ಮೇಲೆ ತುಂಬುವುದು.

xi) ವಿಭಾಗಿಯ ಮಟ್ಟದಲ್ಲಿ Division Quality Monitors ತಂಡವನ್ನು ರಚಿಸಲು ಮುಖ್ಯ ಇಂಜಿನೀಯರ್‌ರವರು ಕ್ರಮವಹಿಸುವುದು.

xii) ಕಾಮಗಾರಿಯನ್ನು ಪ್ರಸ್ತಾಪಿಸುವಾಗ ಸ್ಥಳದ ಲಭ್ಯತೆಯನ್ನು ಕಡ್ಡಾಯವಾಗಿ ಪರಿಶೀಲಿಸಿ ಕ್ರಿಯಾಯೋಜನೆಯಲ್ಲಿ ಕಾಮಗಾರಿ ಪ್ರಸ್ತಾಪಿಸುವುದು.

18) **ಗುಣಮಟ್ಟ ನಿಯಂತ್ರಣ**

ಲೋಕೋಪಯೋಗಿ ಇಲಾಖೆಯ ಗುಣಮಟ್ಟದ ಕೈಪಿಡಿ (Quality manual) ಪ್ರಕಾರ ಕಾಮಗಾರಿಗಳ ಗುಣಮಟ್ಟ ಹಾಗೂ ಪರಿಮಾಣಗಳನ್ನು ಖಚಿತಪಡಿಸಿಕೊಳ್ಳುವುದು ಯೋಜನಾ ಸಮಾಲೋಚಕರ (ಪಿಎಂಸಿ) ಕರ್ತವ್ಯವಾಗಿರುತ್ತದೆ. ಯೋಜನಾ ಸಮಾಲೋಚಕರ ಜೊತೆಗೆ ಕಾಮಗಾರಿಗಳ ಗುಣಮಟ್ಟ ಮತ್ತು ಸ್ವಲ್ಪ ಮಟ್ಟಿಗೆ ಪರಿಮಾಣಗಳನ್ನು ಹೋಲಿಸಿ ನೋಡಲು ಪಿಎಂಜಿಎಸ್‌ವೈ ಮಾದರಿಯಲ್ಲಿ ರಾಜ್ಯ/ ರಾಷ್ಟ್ರೀಯ ಗುಣಮಟ್ಟ ನಿಯಂತ್ರಕರನ್ನು ಪೌರಾಡಳಿತ ನಿರ್ದೇಶಕರ ಶಿಫಾರಸ್ಸಿನನ್ವಯ ನಗರಾಭಿವೃದ್ಧಿ ಇಲಾಖೆಯು ನೇಮಿಸಲಿದೆ.

**19) ಯೋಜನೆಯ ಅನುಷ್ಠಾನದ ವ್ಯವಸ್ಥೆ ಮತ್ತು ಮೌಲ್ಯ ಮಾಪನ:-**

i) ಮುಖ್ಯಮಂತ್ರಿಗಳ ಅಮೃತ ನಗರೋತ್ಥಾನ (ಮುನಿಸಿಪಾಲಿಟಿ) ಯೋಜನೆ (ಹಂತ-4)ಯ ಕಾರ್ಯಕ್ರಮವನ್ನು ಜಾರಿಮಾಡಲು ಪೌರಾಡಳಿತ ನಿರ್ದೇಶನಾಲಯವು ನೋಡೆಲ್ ಏಜೆನ್ಸಿಯಾಗಿ ಕರ್ತವ್ಯ ನಿರ್ವಹಿಸುತ್ತದೆ. ಯೋಜನೆಯ ಒಟ್ಟಾರೆ ಮೇಲ್ವಿಚಾರಣೆ ಮತ್ತು ಅನುಷ್ಠಾನದ ಜವಾಬ್ದಾರಿಯನ್ನು ನಗರಾಭಿವೃದ್ಧಿ ಇಲಾಖೆಯು ಹೊಂದಿರುತ್ತದೆ.

ii) ಪೌರಾಡಳಿತ ನಿರ್ದೇಶನಾಲಯವು ಮುಖ್ಯಮಂತ್ರಿಗಳ ಅಮೃತ ನಗರೋತ್ಥಾನ (ಮುನಿಸಿಪಾಲಿಟಿ) ಯೋಜನೆ (ಹಂತ-4)ಯ ಮೌಲ್ಯ ಮಾಪನವನ್ನು ಏಕಕಾಲದಲ್ಲಿ ಒಟ್ಟಿಗೆ ನಡೆಸತಕ್ಕದ್ದು. ಯೋಜನೆಯ ಮೌಲ್ಯ ಮಾಪನದಿಂದಾಗಿ ಯಾವುದಾದರೂ ಬದಲಾವಣೆ/ ತಿದ್ದುಪಡಿಗಳು ಅವಶ್ಯಕತೆ ಇದ್ದರೆ, ಅವುಗಳನ್ನು ಅಳವಡಿಸಿ ಯೋಜನೆಯ ಕಾಮಗಾರಿಗಳನ್ನು ಗುಣಮಟ್ಟದಿಂದ ಹಾಗೂ ಕಾಲಮಿತಿಯೊಳಗೆ ಅನುಷ್ಠಾನಗೊಳಿಸಲು ಪೌರಾಡಳಿತ ನಿರ್ದೇಶನಾಲಯವು ಕ್ರಮವಹಿಸತಕ್ಕದ್ದು.

## 20) ಮುಖ್ಯಮಂತ್ರಿಗಳ ಅಮೃತ ನಗರೋತ್ಥಾನ (ಮುನಿಸಿಪಾಲಿಟಿ) ಯೋಜನೆ (ಹಂತ-4)ರ ಜಿಲ್ಲಾ ಮಟ್ಟದ ಸಮಿತಿ ಮತ್ತು ಅವರ ಕರ್ತವ್ಯಗಳು:-

ಜಿಲ್ಲಾಮಟ್ಟದ ಸಮಿತಿಯು ಈ ಕೆಳಕಂಡ ಸದಸ್ಯರುಗಳನ್ನು ಒಳಗೊಂಡಿರುತ್ತದೆ.

**ಕೋಷ್ಟಕ-2**

| | | |
|---|---|---|
| 1 | ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾ ಉಸ್ತುವಾರಿ ಸಚಿವರು | ಅಧ್ಯಕ್ಷರು |
| 2 | ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು | ಸದಸ್ಯರು |
| 3 | ಸಂಬಂಧಪಟ್ಟ ನಗರ ಸ್ಥಳೀಯ ಸಂಸ್ಥೆ ವ್ಯಾಪ್ತಿಯ ಸ್ಥಳೀಯ ಶಾಸಕರು | ಸದಸ್ಯರು |
| 4 | ಸಂಬಂಧಪಟ್ಟ ನಗರ ಸ್ಥಳೀಯ ಸಂಸ್ಥೆಯ ಅಧ್ಯಕ್ಷರು | ಸದಸ್ಯರು |
| 5 | ಸಂಬಂಧಪಟ್ಟ ಜಿಲ್ಲೆಯ ಯೋಜನಾ ನಿರ್ದೇಶಕರು ಜಿಲ್ಲಾ ನಗರಾಭಿವೃದ್ಧಿ ಕೋಶ | ಸದಸ್ಯರು |
| 6 | ಸಂಬಂಧಪಟ್ಟ ನಗರ ಸ್ಥಳೀಯ ಸಂಸ್ಥೆಯ ಪೌರಾಯುಕ್ತರು/ ಮುಖ್ಯಾಧಿಕಾರಿಗಳು | ಸದಸ್ಯರು |
| 7 | ಸಂಬಂಧಪಟ್ಟ ಜಿಲ್ಲೆಯ ಕಾರ್ಯಪಾಲಕ ಅಭಿಯಂತರರು ಲೋಕೋಪಯೋಗಿ ಇಲಾಖೆ | ಸದಸ್ಯರು |
| 8 | ಸಂಬಂಧಪಟ್ಟ ಜಿಲ್ಲೆಯ ಕಾರ್ಯಪಾಲಕ ಅಭಿಯಂತರರು, ಜಿಲ್ಲಾ ನಗರಾಭಿವೃದ್ಧಿ ಕೋಶ | ಸದಸ್ಯ ಕಾರ್ಯದರ್ಶಿಗಳು |

## 21) ಮುಖ್ಯಮಂತ್ರಿಗಳ ಅಮೃತ ನಗರೋತ್ಥಾನ (ಮುನಿಸಿಪಾಲಿಟಿ) ಯೋಜನೆ (ಹಂತ-4)ರ ಜಿಲ್ಲಾ ಮಟ್ಟದ ಸಮಿತಿಯು ಕೆಳಕಂಡ ಕರ್ತವ್ಯಗಳನ್ನು ನಿರ್ವಹಿಸುವುದು.

i) ಜಿಲ್ಲಾಧಿಕಾರಿಗಳು ಜಿಲ್ಲೆಯ ನಗರ ಸ್ಥಳೀಯ ಸಂಸ್ಥೆಗಳ ಕ್ರಿಯಾ ಯೋಜನೆಗಳನ್ನು ಯೋಜನೆಯ ಮಾರ್ಗಸೂಚಿಗಳಂತೆ ಪರಿಶೀಲಿಸಿ, ಕ್ರೋಢೀಕರಿಸಿ, ಜಿಲ್ಲಾ ಮಟ್ಟದ ಸಮಿತಿಯ ಮುಂದೆ ಮಂಡಿಸಿ ಶಿಫಾರಸ್ಸಿನೊಂದಿಗೆ ಪ್ರಸ್ತಾವನೆಯನ್ನು ಪೌರಾಡಳಿತ ನಿರ್ದೇಶನಾಲಯಕ್ಕೆ ಅನುಮೋದನೆಗಾಗಿ ಸಲ್ಲಿಸುವುದು.

ii) ಜಿಲ್ಲಾ ಮಟ್ಟದ ಸಮಿತಿಯು ಪ್ರತಿ ಎರಡು ತಿಂಗಳಿಗೊಮ್ಮೆ ಯೋಜನೆಯ ಪ್ರಗತಿ ಪರಿಶೀಲನೆ ಕೈಗೊಳ್ಳತಕ್ಕದ್ದು. ಜಿಲ್ಲಾ ನಗರಾಭಿವೃದ್ಧಿ ಕೋಶವು ಪ್ರತಿ ಮಾಹೆ ಯೋಜನೆಯ ಪ್ರಗತಿಯನ್ನು ಪೌರಾಡಳಿತ ನಿರ್ದೇಶನಾಲಯದ ಪೌರ ಸುಧಾರಣಾ ಕೋಶದ ವೆಬ್‌ಸೈಟ್‌ನಲ್ಲಿ ಆನ್-ಲೈನ್ ಮುಖಾಂತರ ವರದಿ ಮಾಡತಕ್ಕದ್ದು.

iii) ಜಿಲ್ಲಾ ಮಟ್ಟದ ಸಮಿತಿಯು ಯಾವುದೇ ಕಾರಣಕ್ಕೂ ಕಾಮಗಾರಿಗಳ ಬದಲಾವಣೆಗೆ ಅವಕಾಶ ನೀಡಬಾರದು. ಒಂದು ವೇಳೆ ಬದಲಾವಣೆ ಅತ್ಯವಶ್ಯಕತೆ ಇದ್ದಲ್ಲಿ, ನಗರೋತ್ಥಾನ ಜಿಲ್ಲಾ ಮಟ್ಟದ ಸಮಿತಿಯು ಬದಲಿ/ ಉಳಿತಾಯ ಕಾಮಗಾರಿ ಪ್ರಸ್ತಾವನೆಯನ್ನು ಬದಲಾವಣೆಗೆ ಅವಶ್ಯಕವಿರುವ ಕಾರಣಗಳನ್ನು ಮತ್ತು ಬದಲಾವಣೆ ಅನುಮೋದಿಸದೆ ಇದ್ದಲ್ಲಿ, ಉಂಟಾಗುವ ಪರಿಣಾಮಗಳನ್ನು ನಮೂದಿಸಿ, ಜಿಲ್ಲಾಧಿಕಾರಿಗಳು ಮಾರ್ಗಸೂಚಿಗಳಂತೆ ಇರದ ಕ್ರಿಯಾಯೋಜನೆ ಮತ್ತು ಬದಲಿ ಕ್ರಿಯಾಯೋಜನೆಗಳನ್ನು ಪೌರಾಡಳಿತ ನಿರ್ದೇಶಕರಿಗೆ ಸಲ್ಲಿಸತಕ್ಕದ್ದು. ಪೌರಾಡಳಿತ ನಿರ್ದೇಶಕರು ಸದರಿ ಪ್ರಸ್ತಾವನೆಗಳನ್ನು ರಾಜ್ಯ ಮಟ್ಟದ ಸಮಿತಿಯ ಮುಂದೆ ಸೂಕ್ತ ಕ್ರಮಕ್ಕಾಗಿ ಮಂಡಿಸುವುದು.

22) ಮುಖ್ಯಮಂತ್ರಿಗಳ ಅಮೃತ ನಗರೋತ್ಥಾನ (ಮುನಿಸಿಪಾಲಿಟಿ) ಯೋಜನೆ (ಹಂತ-4)ಯ ಜಿಲ್ಲಾಮಟ್ಟದ ಅನುಷ್ಠಾನ ಸಮಿತಿ:-

ಜಿಲ್ಲಾ ಮಟ್ಟದ ಅನುಷ್ಠಾನ ಸಮಿತಿಯು ಈ ಕೆಳಕಂಡ ಸದಸ್ಯರುಗಳನ್ನು ಒಳಗೊಂಡಿರುತ್ತದೆ.

**ಕೋಷ್ಟಕ-3**

| | | |
|---|---|---|
| 1 | ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು | ಅಧ್ಯಕ್ಷರು |
| 2 | ಸಂಬಂಧಪಟ್ಟ ಜಿಲ್ಲೆಯ ಯೋಜನಾ ನಿರ್ದೇಶಕರು, ಜಿಲ್ಲಾ ನಗರಾಭಿವೃದ್ಧಿ ಕೋಶ | ಸದಸ್ಯರು |
| 3 | ಸಂಬಂಧಪಟ್ಟ ಜಿಲ್ಲೆಯ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ | ಸದಸ್ಯರು |
| 4 | ಸಂಬಂಧಪಟ್ಟ ಜಿಲ್ಲೆಯ ಸಹಾಯಕ ಕಾರ್ಯಪಾಲಕ ಅಭಿಯಂತರರು/ ಸಹಾಯಕ / ಕಿರಿಯ ಅಭಿಯಂತರರು | ಸದಸ್ಯರು |
| 5 | ಸಂಬಂಧಪಟ್ಟ ನಗರ ಸ್ಥಳೀಯ ಸಂಸ್ಥೆಗಳ ಪೌರಾಯುಕ್ತರು/ ಮುಖ್ಯಾಧಿಕಾರಿಗಳು | ಸದಸ್ಯರು |
| 6 | ಸಂಬಂಧಪಟ್ಟ ಜಿಲ್ಲೆಯ ಕಾರ್ಯಪಾಲಕ ಅಭಿಯಂತರರು, ಜಿಲ್ಲಾ ನಗರಾಭಿವೃದ್ಧಿ ಕೋಶ | ಸದಸ್ಯ ಕಾರ್ಯದರ್ಶಿಗಳು |

**23)ಮುಖ್ಯಮಂತ್ರಿಗಳ ಅಮೃತ ನಗರೋತ್ಥಾನ (ಮುನಿಸಿಪಾಲಿಟಿ) ಯೋಜನೆ (ಹಂತ-4)ಯ ಜಿಲ್ಲಾ ಮಟ್ಟದ ಅನುಷ್ಠಾನ ಸಮಿತಿಯು ಕೆಳಕಂಡ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು.**

i) ಕ್ರಿಯಾ ಯೋಜನೆಯನ್ನು ತಯಾರಿಸುವುದು ಮತ್ತು ಅಂತಿಮಗೊಳಿಸುವುದು.

ii) ಯೋಜನಾ ಸಮಾಲೋಚಕರ (Project Management Consultants) ಆಯ್ಕೆ.

iii) ಯೋಜನಾ ಸಮಾಲೋಚಕರು ಸಲ್ಲಿಸುವ ವಿಸ್ತೃತ ಯೋಜನಾ ವರದಿಗಳನ್ನು ಪರಿಶೀಲಿಸಿ ಸಕ್ಷಮ ಪ್ರಾಧಿಕಾರಗಳಿಂದ ಆಡಳಿತಾತ್ಮಕ ಅನುಮೋದನೆ ಮತ್ತು ತಾಂತ್ರಿಕ ಮಂಜೂರಾತಿ ಪಡೆದು ಕಾಮಗಾರಿಗಳನ್ನು ನಿಯಮಾನುಸಾರ ಇ-ಪ್ರೊಕ್ಯೂರ್‌ಮೆಂಟ್ ಮುಖಾಂತರ ಟೆಂಡರ್‌ಕರೆದು ಅನುಷ್ಠಾನಗೊಳಿಸಲು ಕ್ರಮವಹಿಸತಕ್ಕದ್ದು.

iv) ಕಾಮಗಾರಿಗಳಿಗೆ ಆಡಳಿತಾತ್ಮಕ ಅನುಮೋದನೆ, ತಾಂತ್ರಿಕ ಮಂಜೂರಾತಿ, ಟೆಂಡರ್‌ನ ತಾಂತ್ರಿಕ ಹಾಗೂ ಆರ್ಥಿಕ ಬಿಡ್‌ಗಳಿಗೆ ಅನುಮೋದನೆ ಮತ್ತು ಗುತ್ತಿಗೆದಾರರಿಗೆ ಗುತ್ತಿಗೆ ಕರಾರು ಮಾಡುವುದು ಸೇರಿದಂತೆ ವಿವಿಧ ಅನುಮೋದನೆಗಳನ್ನು ಮೇಲ್ವಿಚಾರಣೆ ಮಾಡುವುದು.

v) ಯೋಜನೆಯ ಪ್ರಗತಿಯನ್ನು ವೇಳಾಪಟ್ಟಿಯಂತೆ ಕಾಲಕಾಲಕ್ಕೆ ಪರಿಶೀಲನೆ ಹಾಗೂ ಮೇಲ್ವಿಚಾರಣೆ ಕೈಗೊಳ್ಳತಕ್ಕದ್ದು.

**24) ಟೆಂಡರ್‌ಗಳ ಅನುಮೋದನೆ:**

ಆರ್ಥಿಕ ಇಲಾಖೆಯ ಅಧಿಕಾರ ಪ್ರತ್ಯಾಯೋಜನೆಯಂತೆ ಸಕ್ಷಮ ಪ್ರಾಧಿಕಾರಗಳು ಟೆಂಡರ್‌ಗಳಿಗೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳ ಅಧಿನಿಯಮ 1999 ಹಾಗೂ ನಿಯಮಗಳು 2000 ರಂತೆ ಅನುಮೋದನೆ ನೀಡತಕ್ಕದ್ದು ಹಾಗೂ ಸರ್ಕಾರದ ಆದೇಶ ಸಂಖ್ಯೆ: ನಅಇ 184 ಎಂಎನ್‌ಇ 2015, ದಿನಾಂಕ:11-11-2016 ರಂತೆ ಅನುಮೋದನೆ ನೀಡತಕ್ಕದ್ದು.

**25) ಮುಖ್ಯಮಂತ್ರಿಗಳ ಅಮೃತ ನಗರೋತ್ಥಾನ (ಮುನಿಸಿಪಾಲಿಟಿ) ಯೋಜನೆ (ಹಂತ-4)ರ ರಾಜ್ಯ ಮಟ್ಟದ ಸಮಿತಿ ಮತ್ತು ಅವರ ಕರ್ತವ್ಯಗಳು:-**

ರಾಜ್ಯ ಮಟ್ಟದ ಸಮಿತಿಯು ಈ ಕೆಳಕಂಡ ಸದಸ್ಯರುಗಳನ್ನು ಒಳಗೊಂಡಿರುತ್ತದೆ.

**ಕೋಷ್ಟಕ-4**

| | | |
|---|---|---|
| 1 | ಮಾನ್ಯ ಪೌರಾಡಳಿತ ಸಚಿವರು | ಅಧ್ಯಕ್ಷರು |
| 2 | ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ | ಸದಸ್ಯರು |
| 3 | ಕಾರ್ಯದರ್ಶಿಗಳು, ಲೋಕೋಪಯೋಗಿ ಇಲಾಖೆ ಅಥವಾ ಅವರ ಪ್ರತಿನಿಧಿ (ಉಪಕಾರ್ಯದರ್ಶಿ ವೃಂದದ ಹುದ್ದೆಗಿಂತ ಕಡಿಮೆ ಇಲ್ಲದ ಅಧಿಕಾರಿ) | ಸದಸ್ಯರು |
| 4 | ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ (ಉಪಕಾರ್ಯದರ್ಶಿ ವೃಂದದ ಹುದ್ದೆಗಿಂತ ಕಡಿಮೆ ಇಲ್ಲದ ಅಧಿಕಾರಿ) | ಸದಸ್ಯರು |
| 5 | ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ | ಸದಸ್ಯರು ಕಾರ್ಯದರ್ಶಿಗಳು |
| 6 | ಮುಖ್ಯ ಅಭಿಯಂತರರು, ಪೌರಾಡಳಿತ ನಿರ್ದೇಶನಾಲಯ | ಸದಸ್ಯರು |
| 7 | ಜಂಟಿ ನಿರ್ದೇಶಕರು (ಯೋಜನೆ), ನಗರಾಭಿವೃದ್ಧಿ ಇಲಾಖೆ | ಸದಸ್ಯರು |
| 8 | ಅಧೀಕ್ಷಕ ಅಭಿಯಂತರರು/ ಕಾರ್ಯಪಾಲಕ ಅಭಿಯಂತರರು, ತಾಂತ್ರಿಕ ಕೋಶ, ನಗರಾಭಿವೃದ್ಧಿ ಇಲಾಖೆ | ಸದಸ್ಯರು |
| 9 | ಅಧೀಕ್ಷಕ ಅಭಿಯಂತರರು, ಪೌರಾಡಳಿತ ನಿರ್ದೇಶನಾಲಯ | ಸದಸ್ಯರು |
| 10 | ಜಂಟಿ ನಿರ್ದೇಶಕರು (ಅಭಿವೃದ್ಧಿ) ಪೌರಾಡಳಿತ ನಿರ್ದೇಶನಾಲಯ | ಸದಸ್ಯರು |

**26) ಮುಖ್ಯಮಂತ್ರಿಗಳ ಅಮೃತ ನಗರೋತ್ಥಾನ (ಮುನಿಸಿಪಾಲಿಟಿ) ಯೋಜನೆ (ಹಂತ-4)ರ ರಾಜ್ಯ ಮಟ್ಟದ ಸಮಿತಿಯು ಈ ಕೆಳಕಂಡ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು:-**

i) ಯೋಜನೆಯ ಪ್ರಗತಿ ಪರಿಶೀಲನೆ ಹಾಗೂ ಮೇಲ್ವಿಚಾರಣೆ.

ii) ಜಿಲ್ಲಾ ಮಟ್ಟದ ಸಮಿತಿ ಸಭೆಯ ಶಿಫಾರಸ್ಸಿನಂತೆ ನಗರ ಸ್ಥಳೀಯ ಸಂಸ್ಥೆಗಳ ಕ್ರಿಯಾ ಯೋಜನೆ ಮತ್ತು ಬದಲಿ ಹಾಗೂ ಉಳಿತಾಯ ಕ್ರಿಯಾಯೋಜನೆಗಳಿಗೆ ಅನುಮೋದನೆ ನೀಡುವುದು. ಸದರಿ ಯೋಜನೆಯಡಿ ಕಾರಣಾಂತರದಿಂದ ಉಳಿತಾಯವಾಗುವ ಮೊತ್ತಕ್ಕೆ ಸೂಕ್ತ ಸ್ಪಷ್ಟೀಕರಣದೊಂದಿಗೆ ಮೂಲ ಗುತ್ತಿಗೆಯ ಅಂತಿಮ ಬಿಲ್ಲು ತಯಾರಿಸಿದ ನಂತರ ಒಂದು ಬಾರಿ ಮಾತ್ರ ಕ್ರಿಯಾಯೋಜನೆಯನ್ನು ರೂಪಿಸಿ ಅನುಷ್ಠಾನಗೊಳಿಸಲು ಅವಕಾಶ ಕಲ್ಪಿಸಲಾಗಿದೆ.

iii) ಯೋಜನೆಯ ಸಮರ್ಪಕ ಅನುಷ್ಠಾನಕ್ಕೆ ಅಗತ್ಯವಿರುವ ಬದಲಾವಣೆಗಳ ಬಗ್ಗೆ ಸಲಹೆಗಳನ್ನು ನೀಡುವುದು.

27) **ಯೋಜನಾ ಸಮಾಲೋಚಕರು (Project Management Consultants):-**

i) ಯೋಜನಾ ಸಮಾಲೋಚಕರ ಸೇವೆಯನ್ನು ಅಗತ್ಯವಿದ್ದಲ್ಲಿ ಮೇಲಿನ ಕಂಡಿಕೆ 3 ರಲ್ಲಿನ ಷರತ್ತಿನಂತೆ ಎಲ್ಲಾ ಜಿಲ್ಲೆಗಳಿಗೆ ಪೌರಾಡಳಿತ ನಿರ್ದೇಶನಾಲಯದ ಹಂತದಲ್ಲಿ ಟೆಂಡರ್ ಕರೆದು ನೇಮಿಸಿಕೊಳ್ಳುವುದು.

ಯೋಜನಾ ಸಮಾಲೋಚಕರ ಕರ್ತವ್ಯಗಳನ್ನು **ಅನುಬಂಧ-02** ರಲ್ಲಿ ನೀಡಿದೆ.

ii) ಪೌರಾಡಳಿತ ನಿರ್ದೇಶನಾಲಯವು ಯೋಜನಾ ಸಮಾಲೋಚಕರ ವೆಚ್ಚವನ್ನು ಕಾರ್ಯಪಾಲಕ ಅಭಿಯಂತರರುಗಳಿಗೆ ಬಿಡುಗಡೆ ಮಾಡುತ್ತದೆ ಮತ್ತು ಕಾರ್ಯಪಾಲಕ ಅಭಿಯಂತರರು ಯೋಜನಾ ಸಮಾಲೋಚಕರು (ಪಿಎಂಸಿ) ಗಳ ವೆಚ್ಚವನ್ನು ಭರಿಸತಕ್ಕದ್ದು.

iii) ಪೌರಾಡಳಿತ ನಿರ್ದೇಶನಾಲಯವು ಯೋಜನಾ ಸಮಾಲೋಚಕರು **Project Management Consultants** ರವರುಗಳನ್ನು ಆರ್ಥಿಕ ಇಲಾಖೆಯ ಮಾರ್ಗಸೂಚಿಗಳಂತೆ ಗುಣಮಟ್ಟ ಮತ್ತು ಮೌಲ್ಯದ ಆಧಾರ **(Quality & Cost Based Selection (QCBS))** ದ ಮೇಲೆ ಹಾಗೂ ಗುಣಮಟ್ಟ (Quality) ಕ್ಕೆ ಶೇಕಡ 25 ರಷ್ಟು ವೈಟೇಜ್ ಮತ್ತು ಮೌಲ್ಯ (Cost) ಕ್ಕೆ ಶೇಕಡ 25 ರಷ್ಟು ವೈಟೇಜ್ ನೀಡಿ ಆಯ್ಕೆ ಮಾಡಿಕೊಳ್ಳತಕ್ಕದ್ದು.

28) **ಮುಖ್ಯಮಂತ್ರಿಗಳ ಅಮೃತ ನಗರೋತ್ಥಾನ (ಮುನಿಸಿಪಾಲಿಟಿ) ಯೋಜನೆ (ಹಂತ-4)ಯ ನಗರೋತ್ಥಾನ ಕೋಶ:-**

ಮುಖ್ಯಮಂತ್ರಿಗಳ ಅಮೃತ ನಗರೋತ್ಥಾನ (ಮುನಿಸಿಪಾಲಿಟಿ) ಯೋಜನೆ (ಹಂತ-4)ಯನ್ನು ಅನುಷ್ಠಾನಗೊಳಿಸಲು ನಗರೋತ್ಥಾನ (ಮುನಿಸಿಪಾಲಿಟಿ)-3ನೇ ಹಂತದ ಯೋಜನೆಯಲ್ಲಿರುವ ಪೌರಾಡಳಿತ ನಿರ್ದೇಶನಾಲಯದ ನಗರೋತ್ಥಾನ ಕೋಶವನ್ನು ಮುಖ್ಯಮಂತ್ರಿಗಳ ಅಮೃತ ನಗರೋತ್ಥಾನ (ಮುನಿಸಿಪಾಲಿಟಿ) ಯೋಜನೆ (ಹಂತ-4)ಯ ಯೋಜನಾ ಅವಧಿಗೆ ಮುಂದುವರಸಿದೆ. ನಗರೋತ್ಥಾನ ಕೋಶಕ್ಕೆ ಹೆಚ್ಚುವರಿ ಸಿಬ್ಬಂದಿಗಳು ಅವಶ್ಯವಿದ್ದಲ್ಲಿ ರಾಜ್ಯಮಟ್ಟದ ಸಮಿತಿಯ ಅನುಮೋದನೆ ಪಡೆದು ನೇಮಿಸಿಕೊಳ್ಳತಕ್ಕದ್ದು. ನಗರೋತ್ಥಾನ ಕೋಶದ ವೆಚ್ಚವನ್ನು ಪೌರಾಡಳಿತ ನಿರ್ದೇಶಕರು ಭರಿಸತಕ್ಕದ್ದು.

29) **ಅನುದಾನ ಸಾಲದ ಬಿಡುಗಡೆ ಹಾಗೂ ಬಳಕೆ:-**

ಅನುದಾನ ಮತ್ತು ಸಾಲದ ಮೊತ್ತವನ್ನು ಯಾವುದೇ ಜಿಲ್ಲೆಗೆ ಪ್ರತ್ಯೇಕವಾಗಿ ಬಿಡುಗಡೆ ಮಾಡದೆ, ಜಿಲ್ಲೆಗಳ ಅವಶ್ಯಕತೆಗೆ ಅನುಗುಣವಾಗಿ ಡ್ರಾ ಮಾಡಲು ಅನುಕೂಲವಾಗುವ ರೀತಿಯಲ್ಲಿ ಪೌರಾಡಳಿತ ನಿರ್ದೇಶಕರು ಹಾಗೂ 31 ಕಾರ್ಯಪಾಲಕ ಅಭಿಯಂತರರ ಹೆಸರಿನಲ್ಲಿ ಜಂಟಿ ಖಾತೆಗಳನ್ನು ತೆರೆದು ನಿರ್ವಹಿಸಲು ಅವಶ್ಯಕವಿರುವ ವಿಸ್ತೃತ ಮಾರ್ಗಸೂಚಿಗಳನ್ನು ಪೌರಾಡಳಿತ ನಿರ್ದೇಶನಾಲಯವು ಹೊರಡಿಸತಕ್ಕದ್ದು.

30) **ಉತ್ತಮ ಸಾಧನೆಗೈದ ನಗರ ಸ್ಥಳೀಯ ಸಂಸ್ಥೆಗಳಿಗೆ ಪ್ರೋತ್ಸಾಹ ಸುಧಾರಣೆಗೆ ಮನ್ನಣೆ:**

ಮುಖ್ಯಮಂತ್ರಿಗಳ ಅಮೃತ ನಗರೋತ್ಥಾನ (ಮುನಿಸಿಪಾಲಿಟಿ) ಯೋಜನೆ (ಹಂತ-4)ಯಡಿ ನಗರ ಸ್ಥಳೀಯ ಸಂಸ್ಥೆಗೆ ನಿಗದಿಪಡಿಸಲಾದ ಹಂಚಿಕೆಯ ಶೇಕಡ 85 ರಷ್ಟು ಮೊತ್ತಕ್ಕೆ ಕ್ರಿಯಾಯೋಜನೆಯನ್ನು ತಯಾರಿಸುವುದು. ಶೇಕಡ 2 ರಷ್ಟು ಹಂಚಿಕೆ ಮೊತ್ತವನ್ನು ಪಿಎಂಸಿ ಮತ್ತು ನಗರೋತ್ಥಾನ ಕೋಶದ ವೆಚ್ಚಕ್ಕೆ, ಶೇಕಡ 5 ರಷ್ಟು ಮೊತ್ತವನ್ನು ತೀವ್ರ ಮೂಲಭೂತ ಸೌಕರ್ಯ ಕೊರತೆ ಎದುರಿಸುತ್ತಿರುವ ನಗರ ಸ್ಥಳೀಯ ಸಂಸ್ಥೆಗಳ ಮೂಲಭೂತ ಸೌಕರ್ಯ ಅಭಿವೃದ್ಧಿಗಾಗಿ ಪೌರಾಡಳಿತ ಸಚಿವರ ಅನುಮೋದನೆ ಪಡೆದು ಸರ್ಕಾರದಿಂದ ಆದೇಶ ಹೊರಡಿಸುವುದು ಮತ್ತು ಶೇಕಡ 8 ರಷ್ಟು ಅನುದಾನವನ್ನು ಯೋಜನೆಯನ್ನು ಅನುಷ್ಠಾನಗೊಳಿಸುವಲ್ಲಿ ಬರುವ ಎಲ್ಲಾ ಹೆಚ್ಚುವರಿ ವೆಚ್ಚಗಳಾದ Tender Premium, Price Escalation, Variations (Workslip & EIRL) ಮತ್ತು ಉತ್ತಮ ಸಾಧನೆ ಮಾಡಿದ ನಗರ ಸ್ಥಳೀಯ ಸಂಸ್ಥೆಗಳಿಗೆ ಪ್ರೋತ್ಸಾಹ ಧನವಾಗಿ ಬಳಸಿಕೊಳ್ಳಲು ಅವಕಾಶ ಕಲ್ಪಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ ಆಇ 732 ವೆಚ್ಚ-9/2021, ದಿನಾಂಕ 05/01/2022ರಲ್ಲಿ ನೀಡಿರುವ ಸಹಮತಿ ಹಾಗೂ ದಿನಾಂಕ 06-01-2022ರಂದು ನಡೆದ ಸಚಿವ ಸಂಪುಟ ಸಭೆಯ ಕಾರ್ಯಸೂಚಿಯ ವಿಷಯ ಸಂಖ್ಯೆ: ಸಿ-6/2022 ರಲ್ಲಿ ಕೈಗೊಂಡ ನಿರ್ಣಯದನ್ವಯ ಹೊರಡಿಸಲಾಗಿದೆ.

ಕರ್ನಾಟಕರಾಜ್ಯಪಾಲರಆಜ್ಞಾನುಸಾರ
ಮತ್ತುಅವರ ಹೆಸರಿನಲ್ಲಿ
14/1/22
(ಎಸ್.ಮಹದೇವ)
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಇವರಿಗೆ:

1. ಮಹಾಲೇಖಪಾಲಕರು (ಲೆಕ್ಕ ಮತ್ತು ಲೆಕ್ಕ ಪರಿಶೋಧನೆ), ಕರ್ನಾಟಕ, ಬೆಂಗಳೂರು.
2. ಸರ್ಕಾರದ ಮುಖ್ಯ ಕಾರ್ಯದರ್ಶಿಗಳು, ವಿಧಾನ ಸೌಧ, ಬೆಂಗಳೂರು.
3. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ವಿಧಾನ ಸೌಧ, ಬೆಂಗಳೂರು.
4. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಯೋಜನಾ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು.
5. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ, ವಿಧಾನ ಸೌಧ, ಬೆಂಗಳೂರು.
6. ಮಾನ್ಯ ಮುಖ್ಯ ಮಂತ್ರಿಗಳ ಪ್ರಧಾನ ಕಾರ್ಯದರ್ಶಿ, ವಿಧಾನ ಸೌಧ, ಬೆಂಗಳೂರು.
7. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಲೋಕೋಪಯೋಗಿ ಇಲಾಖೆ, ಬೆಂಗಳೂರು.
8. ಸರ್ಕಾರದ ಕಾರ್ಯದರ್ಶಿಗಳು, ಲೋಕೋಪಯೋಗಿ ಇಲಾಖೆ, ವಿಕಾಸಸೌಧ, ಬೆಂಗಳೂರು.
9. ವ್ಯವಸ್ಥಾಪಕ ನಿರ್ದೇಶಕರು, ಕೆಯುಐಡಿಎಫ್‌ಸಿ, ಬೆಂಗಳೂರು
10. ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ, ಬೆಂಗಳೂರು.
11. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ.
12. ರಾಜ್ಯದ ಎಲ್ಲಾ ಜಿಲ್ಲೆಯ ಜಿಲ್ಲಾಧಿಕಾರಿಗಳು.
13. ಮಾನ್ಯ ಪೌರಾಡಳಿತ ಸಚಿವರ ಆಪ್ತ ಕಾರ್ಯದರ್ಶಿಗಳು.
14. ಮಾನ್ಯ ಜಿಲ್ಲಾ ಉಸ್ತುವಾರಿ ಸಚಿವರುಗಳ ಆಪ್ತ ಕಾರ್ಯದರ್ಶಿಗಳು.
15. ಸರ್ಕಾರದ ಉಪ ಕಾರ್ಯದರ್ಶಿಗಳು, ಸಚಿವ ಸಂಪುಟ ಶಾಖೆ, ವಿಧಾನ ಸೌಧ, ಬೆಂಗಳೂರು.
16. ರಾಜ್ಯದ ಎಲ್ಲಾ ಜಿಲ್ಲೆಗಳ ಯೋಜನಾ ನಿರ್ದೇಶಕರು, ಜಿಲ್ಲಾ ನಗರಾಭಿವೃದ್ಧಿ ಕೋಶ, ಬೆಂಗಳೂರು.
17. ಸಂಬಂಧಿಸಿದ ಎಲ್ಲಾ ಅಧ್ಯಕ್ಷರುಗಳು, ನಗರಸಭೆ, ಪುರಸಭೆ, ಪಟ್ಟಣ ಪಂಚಾಯತಿ-ಪೌರಾಡಳಿತ ನಿರ್ದೇಶನಾಲಯದ ಮುಖಾಂತರ.
18. ಸಂಬಂಧಿಸಿದ ಎಲ್ಲಾ ಆಯುಕ್ತರು/ಮುಖ್ಯಾಧಿಕಾರಿಗಳು, ನಗರಸಭೆ / ಪುರಸಭೆ / ಪಟ್ಟಣ ಪಂಚಾಯತಿ-ಪೌರಾಡಳಿತ ನಿರ್ದೇಶನಾಲಯದ ಮುಖಾಂತರ.
19. ಸರ್ಕಾರದ ಅಧೀನ ಕಾರ್ಯದರ್ಶಿ, (ವೆಚ್ಚ 3 & 9), ಆರ್ಥಿಕ ಇಲಾಖೆ. ವಿಧಾನಸೌಧ, ಬೆಂಗಳೂರು.
20. ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿ.

ಪ್ರತಿ ಮಾಹಿತಿಗಾಗಿ:

1) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.
2) ಸರ್ಕಾರದ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.
3) ಸರ್ಕಾರದ ಉಪ ಕಾರ್ಯದರ್ಶಿಗಳು 1, 2 ಮತ್ತು 3 ನಗರಾಭಿವೃದ್ಧಿ ಇಲಾಖೆ, ವಿಕಾಸಸೌಧ, ಬೆಂಗಳೂರು.

ಅನುಬಂಧ-1

| ರಾಜ್ಯದ ಎಲ್ಲಾ ನಗರಸಭೆ/ಪುರಸಭೆ/ಪಟ್ಟಣ ಪಂಚಾಯಿತಿಗಳ ಪಟ್ಟಿ | | | | |
|---|---|---|---|---|
| ಕ್ರಮ ಸಂಖ್ಯೆ. | ನಗರಸಭೆ | | ಪುರಸಭೆ | ಪಟ್ಟಣ ಪಂಚಾಯಿತಿ |
| | ರೂ. 40 ಕೋಟಿ | ರೂ. 30.00 ಕೋಟಿ | ರೂ. 10.00 ಕೋಟಿ | ರೂ.5.00 ಕೋಟಿ |
| 1 | ರಾಮನಗರ | ಹೆಬ್ಬಗೋಡಿ | ಆನೇಕಲ್ | ದೊಡ್ಡತೋಗೂರು |
| 2 | ಕೋಲಾರ | ಮಾದನಾಯಕನಹಳ್ಳಿ | ಬೊಮ್ಮಸಂದ್ರ | ಬಾಶೆಟ್ಟಿಹಳ್ಳಿ |
| 3 | ಕೆಜಿಎಫ್ | ದೊಡ್ಡಬಳ್ಳಾಪುರ | ಜಿಗಣಿ | ಹಾರೋಹಳ್ಳಿ |
| 4 | ಚಿಕ್ಕಬಳ್ಳಾಪುರ | ಹೊಸಕೋಟೆ | ಚಂದಾಪುರ | ಕೊರಟಗೆರೆ |
| 5 | ಚಿತ್ರದುರ್ಗ | ನೆಲಮಂಗಲ | ಅತ್ತೀಬೆಲೆ | ಗುಬ್ಬಿ |
| 6 | ಮಂಡ್ಯ | ಚನ್ನಪಟ್ಟಣ | ಕೋನಪ್ಪನ ಅಗ್ರಹಾರ | ತುರುವೇಕೆರೆ |
| 7 | ಹಾಸನ | ಕನಕಪುರ | ಹುಣಸಮಾರನಹಳ್ಳಿ | ಹುಳಿಯಾರು |
| 8 | ಮಡಿಕೇರಿ | ತಿಪಟೂರು | ಚಿಕ್ಕಬಾಣಾವರ | ವೇಮಗಲ್-ಕುರುಗಲ್ |
| 9 | ಚಿಕ್ಕಮಗಳೂರು | ಶಿರಾ | ದೇವನಹಳ್ಳಿ | ಗುಡಿಬಂಡೆ |
| 10 | ಭದ್ರಾವತಿ | ಮುಳಬಾಗಿಲು | ವಿಜಯಪುರ | ಮೊಳಕಾಲ್ಮೂರು |
| 11 | ಚಾಮರಾಜ ನಗರ | ಚಿಂತಾಮಣಿ | ಮಾಗಡಿ | ನಾಯಕನಹಟ್ಟಿ |
| 12 | ಉಡುಪಿ | ಶಿಡ್ಲಘಟ್ಟ | ಬಿಡದಿ | ಜಗಳೂರು |
| 13 | ಕಾರವಾರ | ಗೌರಿಬಿದನೂರು | ಕುಣಿಗಲ್ | ನ್ಯಾಮತಿ |
| 14 | ಬಾಗಲಕೋಟೆ | ಚಳ್ಳಕೆರೆ | ಚಿಕ್ಕ ನಾಯಕನ ಹಳ್ಳಿ | ತೀರ್ಥಹಳ್ಳಿ |
| 15 | ಗದಗ ಬೆಟಗೇರಿ | ಹಿರಿಯೂರು | ಮಧುಗಿರಿ | ಹೊಸನಗರ |
| 16 | ಹಾವೇರಿ | ಹರಿಹರ | ಪಾವಗಡ | ಜೋಗ್-ಕಾರ್ಗಲ್ |
| 17 | ಯಾದಗಿರಿ | ಸಾಗರ | ಬಂಗಾರಪೇಟೆ | ಆನವಟ್ಟಿ |
| 18 | ರಾಯಚೂರು | ಹುಣಸೂರು | ಮಾಲೂರು | ಹೊಳೆಹೊನ್ನೂರು |
| 19 | ಕೊಪ್ಪಳ | ನಂಜನಗೂಡು | ಶ್ರೀನಿವಾಸಪುರ | ಸರಗೂರು |
| 20 | ರಾಣೇಬೆನ್ನೂರ | ಹೂಟಗಳ್ಳಿ | ಬಾಗೇಪಲ್ಲಿ | ರಮ್ಮನಹಳ್ಳಿ |
| 21 | ಗಂಗಾವತಿ | ಕೊಳ್ಳೇಗಾಲ | ಹೊಸದುರ್ಗ | ಕಡಕೊಳ |
| 22 | ಬೀದರ | ಅರಸೀಕೆರೆ | ಹೊಳಲ್ಕೆರೆ. | ಶ್ರೀರಾಂಪುರ |
| 23 | ಹೊಸಪೇಟೆ | ಉಳ್ಳಾಲ | ಚನ್ನಗಿರಿ | ಬೋಗಾದಿ |
| 24 | | ಪುತ್ತೂರು | ಮಲೇಬೆನ್ನೂರು | ಯಳಂದೂರು |
| 25 | | ನಿಪ್ಪಾಣಿ | ಹೊನ್ನಾಳಿ | ಹನೂರು |
| 26 | | ಗೋಕಾಕ | ಶಿಕಾರಿಪುರ | ಬೆಳ್ಳೂರು |
| 27 | | ಶಿರಸಿ | ಶಿರಾಳಕೊಪ್ಪ | ಅರಕಲಗೂಡು |
| 28 | | ದಾಂಡೇಲಿ | ಸೊರಬ | ಆಲೂರು |
| 29 | | ರಬಕವಿ-ಬನಹಟ್ಟಿ | ಕೆ.ಆರ್.ನಗರ | ಕುಶಾಲನಗರ |
| 30 | | ಜಮಖಂಡಿ | ಬನ್ನೂರು | ಸೋಮವಾರ ಪೇಟೆ |
| 31 | | ಇಲಕಲ್ಲ | ಟಿ.ನರಸೀಪುರ | ವಿರಾಜಪೇಟೆ |
| 32 | | ಮುಧೋಳ | ಪಿರಿಯಾಪಟ್ಟಣ | ನರಸಿಂಹರಾಜಪುರ |
| 33 | | ಶಹಾಬಾದ | ಹೆಚ್.ಡಿ.ಕೋಟೆ | ಕೊಪ್ಪ |
| 34 | | ಶಹಪುರ | ಗುಂಡ್ಲುಪೇಟೆ | ಶೃಂಗೇರಿ |
| 35 | | ಸುರಪುರ | ಮದ್ದೂರು | ಮೂಡಿಗೆರೆ |
| 36 | | ಸಿಂಧನೂರು | ಮಳವಳ್ಳಿ | ಅಜ್ಜಂಪುರ |
| 37 | | ಬಸವಕಲ್ಯಾಣ | ಶ್ರೀರಂಗಪಟ್ಟಣ | ಬೆಳ್ತಂಗಡಿ |
| 38 | | ಸಿರುಗುಪ್ಪ | ಕೆ.ಆರ್.ಪೇಟೆ | ಸುಳ್ಯ |
| 39 | | | ಪಾಂಡವಪುರ | ಮುಲ್ಕಿ |
| 40 | | | ನಾಗಮಂಗಲ | ವಿಟ್ಲ |

ಅನುಬಂಧ-1

| ರಾಜ್ಯದ ಎಲ್ಲಾ ನಗರಸಭೆ/ಪುರಸಭೆ/ಪಟ್ಟಣ ಪಂಚಾಯಿತಿಗಳ ಪಟ್ಟಿ | | | | |
|---|---|---|---|---|
| ಕ್ರಮ ಸಂಖ್ಯೆ. | ನಗರಸಭೆ | | ಪುರಸಭೆ | ಪಟ್ಟಣ ಪಂಚಾಯಿತಿ |
| | ರೂ. 40 ಕೋಟಿ | ರೂ. 30.00 ಕೋಟಿ | ರೂ. 10.00 ಕೋಟಿ | ರೂ.5.00 ಕೋಟಿ |
| 41 | | | ಬೇಲೂರು | ಕೋಟೆಕಾರು |
| 42 | | | ಚನ್ನರಾಯಪಟ್ಟಣ | ಕಡಬ |
| 43 | | | ಹೊಳೆನರಸೀಪುರ | ಬಜಪೆ |
| 44 | | | ಸಕಲೇಶಪುರ | ಕಿನ್ನಿಗೋಳಿ |
| 45 | | | ಕಡೂರು | ಸಾಲಿಗ್ರಾಮ |
| 46 | | | ಬೀರೂರು | ಬೈಂದೂರು |
| 47 | | | ತರೀಕೆರೆ | ಖಾನಾಪೂರ |
| 48 | | | ಬಂಟ್ವಾಳ | ರಾಯಬಾಗ |
| 49 | | | ಮೂಡುಬಿದರೆ | ಕಂಕನವಾಡಿ |
| 50 | | | ಸೋಮೇಶ್ವರ | ಎಂ.ಕೆ.ಹುಬ್ಬಳ್ಳಿ |
| 51 | | | ಕಾರ್ಕಳ | ನಾಗನೂರ |
| 52 | | | ಕುಂದಾಪುರ | ಚಿಂಚಲಿ |
| 53 | | | ಕಾಪು | ಯಕ್ಸಾಂಬ |
| 54 | | | ಸವದತ್ತಿ | ಚೆನ್ನಮ್ಮ ಕಿತ್ತೂರ |
| 55 | | | ಸಂಕೇಶ್ವರ | ಕಲ್ಲೋಳಿ |
| 56 | | | ಚಿಕ್ಕೋಡಿ | ಐನಾಪುರ |
| 57 | | | ಬೈಲಹೊಂಗಲ | ಶೇಡಬಾಳ |
| 58 | | | ರಾಮದುರ್ಗ | ಕಬ್ಬೂರ |
| 59 | | | ಮೂಡಲಗಿ | ಬೋರಗಾಂವ |
| 60 | | | ಅಥಣಿ | ಅರಂಭಾವಿ |
| 61 | | | ಹುಕ್ಕೇರಿ | ಕಾಗವಾಡ |
| 62 | | | ಸದಲಗಾ | ಯರಗಟ್ಟಿ |
| 63 | | | ಕುಡಚಿ | ಮಚ್ಚೆ |
| 64 | | | ಮುಗಳಖೋಡ | ಪೀರನವಾಡಿ |
| 65 | | | ಮುನವಳ್ಳಿ | ಅಂಕಲಗಿ-ಅಕ್ಕತಂಗೇರಹಾಳ |
| 66 | | | ಉಗಾರಖುರ್ದ | ಹೊನ್ನಾವರ |
| 67 | | | ಕೊಣ್ಣೂರು | ಸಿದ್ದಾಪುರ |
| 68 | | | ಹಾರೋಗೇರಿ | ಮುಂಡಗೋಡ |
| 69 | | | ಮಲ್ಲಾಪೂರ ಪಿ.ಜಿ. | ಯಲ್ಲಾಪುರ |
| 70 | | | ಭಟ್ಕಳ | ಜಾಲಿ |
| 71 | | | ಕುಮಟಾ | ಮಂಕಿ |
| 72 | | | ಅಂಕೋಲಾ | ಅಲಮೇಲ |
| 73 | | | ಹಳಿಯಾಳ | ಮನಗೂಳಿ |
| 74 | | | ಬಸವನ ಬಾಗೇವಾಡಿ | ಕೊಲ್ಹಾರ |
| 75 | | | ಮುದ್ದೇಬಿಹಾಳ | ನಾಲತವಾಡ |
| 76 | | | ತಾಳಿಕೋಟೆ | ನಿಡಗುಂದಿ |
| 77 | | | ಸಿಂದಗಿ | ದೇವರಹಿಪ್ಪರಗಿ |
| 78 | | | ಇಂಡಿ | ಚಡಚಣ |
| 79 | | | ಮಹಾಲಿಂಗಪೂರ | ತಿಕೋಟಾ |
| 80 | | | ಗುಳೇದಗುಡ್ಡ | ಬಬಲೇಶ್ವರ |

ಅನುಬಂಧ-1

| ರಾಜ್ಯದ ಎಲ್ಲಾ ನಗರಸಭೆ/ಪುರಸಭೆ/ಪಟ್ಟಣ ಪಂಚಾಯಿತಿಗಳ ಪಟ್ಟಿ | | | | |
|---|---|---|---|---|
| ಕ್ರಮ ಸಂಖ್ಯೆ. | ನಗರಸಭೆ | | ಪುರಸಭೆ | ಪಟ್ಟಣ ಪಂಚಾಯಿತಿ |
| | ರೂ. 40 ಕೋಟಿ | ರೂ. 30.00 ಕೋಟಿ | ರೂ. 10.00 ಕೋಟಿ | ರೂ.5.00 ಕೋಟಿ |
| 81 | | | ಬದಾಮಿ | ಕೆರೂರ |
| 82 | | | ತೇರದಾಳ | ಬೀಳಗಿ |
| 83 | | | ಹುನಗುಂದ | ಅಮೀನಗಡ |
| 84 | | | ಅಣ್ಣಿಗೇರಿ | ಬೆಳಗಲಿ |
| 85 | | | ನವಲಗುಂದ | ಕಮತಗಿ |
| 86 | | | ಗಜೇಂದ್ರಗಡ | ಲೋಕಾಪುರ |
| 87 | | | ಲಕ್ಷ್ಮೇಶ್ವರ | ಶಿರೂರು |
| 88 | | | ಮುಂಡರಗಿ | ಅಳ್ನಾವರ |
| 89 | | | ನರಗುಂದ | ಕಲಘಟಗಿ |
| 90 | | | ರೋಣ | ಕುಂದಗೋಳ |
| 91 | | | ಬ್ಯಾಡಗಿ | ಮುಳಗುಂದ |
| 92 | | | ಹಾನಗಲ್ಲ | ನರೇಗಲ್ಲ |
| 93 | | | ಸವಣೂರು | ಶಿರಹಟ್ಟಿ |
| 94 | | | ಶಿಗ್ಗಾಂವ | ಹಿರೇಕೆರೂರು |
| 95 | | | ಬಂಕಾಪುರ | ಗುತ್ತಲ |
| 96 | | | ಆಳಂದ | ರಟ್ಟೆಹಳ್ಳಿ |
| 97 | | | ಚಿತ್ತಾಪುರ | ಕಾಳಗಿ |
| 98 | | | ಸೇಡಂ | ಕಮಲಾಪೂರ |
| 99 | | | ವಾಡಿ | ಯಡ್ರಾಮಿ |
| 100 | | | ಅಫಜಲಪೂರ | ಹುಣಸಗಿ |
| 101 | | | ಚಿಂಚೋಳಿ | ಕವಿತಾಳ |
| 102 | | | ಜೇವರ್ಗಿ | ತುರುವಿಹಾಳ |
| 103 | | | ಗುರುಮಿಟ್ಕಲ್ | ಬಳಗನೂರು |
| 104 | | | ಕಕ್ಕೇರಾ | ಸಿರವಾರ |
| 105 | | | ಕೆಂಬಾವಿ | ಹಟ್ಟಿ |
| 106 | | | ಮಾನವಿ | ಯಲಬುರ್ಗಾ |
| 107 | | | ದೇವದುರ್ಗ | ಕನಕಗಿರಿ |
| 108 | | | ಲಿಂಗಸೂಗೂರು | ಕುಕನೂರ |
| 109 | | | ಮುದಗಲ್ಲ | ತಾವರಗೇರ |
| 110 | | | ಮಸ್ಕಿ | ಭಾಗ್ಯನಗರ |
| 111 | | | ಕುಷ್ಟಗಿ | ಔರಾದ |
| 112 | | | ಕಾರಟಗಿ | ತೆಕ್ಕಲ ಕೋಟೆ |
| 113 | | | ಭಾಲ್ಕಿ | ಕುಡಿತಿನಿ |
| 114 | | | ಹುಮನಾಬಾದ | ಕಮಲಾಪುರ |
| 115 | | | ಚಿಟಗುಪ್ಪಾ | ಕೂಡ್ಲಿಗಿ |
| 116 | | | ಹಳ್ಳಿಖೇಡ | ಕೊಟ್ಟೂರು |
| 117 | | | ಕಂಪ್ಲಿ | ಮರಿಯಮ್ಮನಹಳ್ಳಿ |
| 118 | | | ಜಾಲಹಳ್ಳಿ | |
| 119 | | | ಸಂಡೂರು | |
| 120 | | | ಕುರೇಕುಪ್ಪ | |

ಅನುಬಂಧ-1

| ರಾಜ್ಯದ ಎಲ್ಲಾ ನಗರಸಭೆ/ಪುರಸಭೆ/ಪಟ್ಟಣ ಪಂಚಾಯಿತಿಗಳ ಪಟ್ಟಿ | | | | |
|---|---|---|---|---|
| ಕ್ರಮ ಸಂಖ್ಯೆ. | ನಗರಸಭೆ | | ಪುರಸಭೆ | ಪಟ್ಟಣ ಪಂಚಾಯಿತಿ |
| | ರೂ. 40 ಕೋಟಿ | ರೂ. 30.00 ಕೋಟಿ | ರೂ. 10.00 ಕೋಟಿ | ರೂ.5.00 ಕೋಟಿ |
| 121 | | | ಕುರುಗೋಡು | |
| 122 | | | ಹೂವಿನಹಡಗಲಿ | |
| 123 | | | ಹಗರಿಬೊಮ್ಮನಹಳ್ಳಿ | |
| 124 | | | ಹರಪನಹಳ್ಳಿ | |
| | **23** | **38** | **124** | **117** |
| ಒಟ್ಟು | | | | **302** |

14/11/22

(ಎಸ್ ಮಹದೇವ)
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ

## ಅನುಬಂಧ-2

ಯೋಜನಾ ಸಮಾಲೋಚಕರು(Project Management Consultants) ರವರು ವಿವರವಾದ ಅಂದಾಜು ಪಟ್ಟಿ ತಯಾರಿಕೆ, ಟೆಂಡರ್ ಪ್ರಕ್ರಿಯೆಯಲ್ಲಿ ಸಹಾಯ, ಮೇಲ್ವಿಚಾರಣೆ ಮತ್ತು ನಿಗಧಿತ ಸಮಯದಲ್ಲಿ ಯೋಜನೆಗಳನ್ನು ಪೂರ್ಣಗೊಳಿಸುವ ಜವಾಬ್ದಾರಿ ಹೊಂದಿರುತ್ತಾರೆ. ಕಾಮಗಾರಿಗಳ ಗುಣಮಟ್ಟ ಮೇಲ್ವಿಚಾರಕ ಸಮಾಲೋಚಕರಾಗಿಯೂ ಸಹ ಪಿ.ಎಂ.ಸಿ. ರವರು ಕರ್ತವ್ಯ ನಿರ್ವಹಿಸಬೇಕಾಗಿರುತ್ತದೆ. ನೇಮಿಸಿಕೊಂಡ ಯೋಜನಾ ಸಮಾಲೋಚಕರು (Project Management Consultants) ರವರುಗಳು ಈ ಕೆಳಕಂಡ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು.

i) ಜಿ.ಪಿ.ಎಸ್ coordinates ಗಳನ್ನು ಬಳಸಿಕೊಂಡು ವಿಸ್ತೃತ ಯೋಜನಾ ವರದಿ (ಡಿಪಿಆರ್) ಗಳನ್ನು ತಯಾರಿಸುವುದು.

ii) ಟೆಂಡರ್ ದಾಖಲೆಗಳನ್ನು ಸಿದ್ಧಪಡಿಸುವುದು ಹಾಗೂ ಟೆಂಡರ್ ಪ್ರಕ್ರಿಯೆಯಲ್ಲಿ ಸಹಾಯ ಮಾಡುವುದು.

iii) ಕಾಮಗಾರಿಗಳನ್ನು GIS Map ನಲ್ಲಿ ಹಾಗೂ GIS ವ್ಯವಸ್ಥೆಯಲ್ಲಿ ಅಳವಡಿಸುವ ಜವಾಬ್ದಾರಿಯನ್ನು ಹೊಂದಿರತಕ್ಕದ್ದು.

iv) ಕಾಮಗಾರಿಗಳ ದಿನನಿತ್ಯದ ನಿರ್ವಹಣೆ ಮತ್ತು ಪರಿವೀಕ್ಷಣೆ.

v) ನಗರ ಸ್ಥಳೀಯ ಸಂಸ್ಥೆಗಳ ಅಭಿಯಂತರರೊಂದಿಗೆ ಕಾಮಗಾರಿಗಳ ಅನುಷ್ಠಾನವನ್ನು ಪರಿವೀಕ್ಷಿಸತಕ್ಕದ್ದು.

vi) ಕಾಮಗಾರಿಯ ಗುಣಮಟ್ಟ ಉತ್ತಮವಾಗಿ ನಿರ್ಮಾಣವಾಗುವಂತೆ ಉಸ್ತುವಾರಿ ವಹಿಸಿ ದೃಢೀಕರಿಸುವುದು.

vii) ಕಾಲ-ಕಾಲಕ್ಕೆ ಪ್ರಗತಿ ವರದಿಯನ್ನು ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ಮತ್ತು ಪೌರಾಡಳಿತ ನಿರ್ದೇಶನಾಲಯಕ್ಕೆ ಜಿಲ್ಲಾ ನಗರಾಭಿವೃದ್ಧಿ ಕೋಶದ ಮೂಲಕ ಸಲ್ಲಿಸುವುದು.

viii) ನಿಗಧಿತ ಕಾಲಕ್ಕೆ ಯೋಜನೆಯನ್ನು ಪೂರ್ಣಗೊಳಿಸಲು ಸ್ಥಳೀಯ ಸಂಸ್ಥೆಗಳ ಅಧಿಕಾರಿಗಳೊಂದಿಗೆ ಮೈಲುಗಲ್ಲುಗಳನ್ನು ನಿಗದಿಪಡಿಸುವುದು ಮತ್ತು ನಿಗದಿತ ಸಮಯದೊಳಗೆ ಕಾಮಗಾರಿಯನ್ನು ಪೂರ್ಣಗೊಳಿಸಲು ಸಹಕರಿಸುವುದು.

ix) ಅನುಷ್ಠಾನವಾದ ಕಾಮಗಾರಿಗಳ ಬಿಲ್ಲುಗಳನ್ನು ನಗರ ಸ್ಥಳೀಯ ಸಂಸ್ಥೆಯ ಮತ್ತು ಜಿಲ್ಲಾ ನಗರಾಭಿವೃದ್ಧಿ ಕೋಶದ ಅಭಿಯಂತರರುಗಳ ನೆರವಿನೊಂದಿಗೆ ನಿಗಧಿತ ಅವಧಿಯಲ್ಲಿ ಅನುಮೋದನೆಗಾಗಿ ಸಕ್ಷಮ ಪ್ರಾಧಿಕಾರಕ್ಕೆ ಸಲ್ಲಿಸುವುದು.

x) ಗುತ್ತಿಗೆದಾರರು ಟೆಂಡರ್ ಕರಾರಿನ್ವಯ ಕಾಮಗಾರಿಗಳನ್ನು ನಿರ್ವಹಿಸಲು ಜಿಲ್ಲಾಡಳಿತ ಮತ್ತು ನಗರ ಸ್ಥಳೀಯ ಸಂಸ್ಥೆಗಳಿಗೆ ಬೇಕಾದ ಎಲ್ಲಾ ಅಗತ್ಯ ಸಹಕಾರ ಮತ್ತು ನೆರವು ನೀಡುವುದು.

xi) ಕ್ರಿಯಾಯೋಜನೆಯಲ್ಲಿ ಪ್ರಸ್ತಾಪಿಸಿರುವ ಕಾಮಗಾರಿಗಳ ಎಲ್ಲಾ ಅಂಶಗಳು ವಿಸ್ತೃತ ಯೋಜನಾ ವರದಿಯಲ್ಲಿ ಸೇರ್ಪಡೆಗೊಂಡಿರುವ ಬಗ್ಗೆ ಹಾಗೂ ಯಾವುದೇ ತಾಂತ್ರಿಕ ನ್ಯೂನ್ಯತೆಗಳು ಇಲ್ಲದಂತೆ ನೋಡಿಕೊಳ್ಳುವ ಜವಾಬ್ದಾರಿಯನ್ನು ಯೋಜನಾ ಸಮಾಲೋಚಕರು, ನಗರ ಸ್ಥಳೀಯ ಸಂಸ್ಥೆ ಮತ್ತು ಜಿಲ್ಲಾ ನಗರಾಭಿವೃದ್ಧಿ ಕೋಶದ ಅಭಿಯಂತರರುಗಳು ಹೊಂದಿರುತ್ತಾರೆ.

xii) ಯೋಜನಾ ಸಮಾಲೋಚಕರು ಕಾಮಗಾರಿಗಳ ವಿವರಗಳನ್ನು Project Management software ನಲ್ಲಿ ನಮೂದಿಸುವ ಜವಾಬ್ದಾರಿ ಹೊಂದಿರುತ್ತಾರೆ.

xiii) ರಾಜ್ಯ ಮಟ್ಟದ ಗುಣಮಟ್ಟ ನಿರ್ವಹಣೆ ಮತ್ತು ಮೇಲ್ವಿಚಾರಣೆ ವ್ಯವಸ್ಥೆಯನ್ನು ಕೈಗೊಳ್ಳುವ ಜವಾಬ್ದಾರಿಯನ್ನು ನಗರಾಭಿವೃದ್ಧಿ ಇಲಾಖೆಯ ಕಾರ್ಯದರ್ಶಿಗಳು ಹೊಂದಿರುತ್ತಾರೆ.

...2

xiv) ವಿನ್ಯಾಸದ ಪ್ರಮುಖ ಅಂಶಗಳು (ಡಿಪಿಆರ್ ಸಮಲೋಚಕರಿಗೆಅನ್ವಯಿಸುತ್ತದೆ):-

1. Indian Road Congress (ಐ.ಆರ್.ಸಿ)ಯ ಮಾನದಂಡಗಳ ಪ್ರಕಾರ
2. ಸ್ಥಳದ ಮಣ್ಣಿನ ಸಾಮರ್ಥ್ಯ (ಸಿ.ಬಿ.ಆರ್)
3. ವಾಹನ ಸಾಂದ್ರತೆಯನ್ನು ಪರಿಗಣಿಸುವುದು
4. ಸ್ಥಳೀಯವಾಗಿ ಲಭ್ಯವಿರುವ ಸಾಮಗ್ರಿಗಳನ್ನು ಸಾಮಗ್ರಿಗಳನ್ನು ಅಳವಡಿಸುವುದು ಹಾಗೂ ಮುಖ್ಯವಾಗಿರಸ್ತೆ ನಿರ್ಮಾಣದಲ್ಲಿ ಹೊಸ ತಾಂತ್ರಿಕತೆಯನ್ನು ಅಳವಡಿಸುವುದು.

xv) ಗುತ್ತಿಗೆದಾರರು ಸಲ್ಲಿಸಿದ ಬಿಲ್ಲುಗಳನ್ನು ಪರಿಶೀಲಿಸಿ ಯೋಜನಾ ಅನುಷ್ಠಾನ ಘಟಕಕ್ಕೆ ನೀಡುವುದು.

xvi) ಕಾಮಗಾರಿಯ ಎಲ್ಲಾ ಹಂತದ ಛಾಯಾಚಿತ್ರಗಳು ಮತ್ತು ವಿಡಿಯೋ ಚಿತ್ರೀಕರಣ ಮಾಡುವುದು.

xvii) ಈ ಯೋಜನೆಗೆ ಸಂಭಂಧಪಟ್ಟಂತೆ ಆರ್ಥಿಕ ಮತ್ತು ಭೌತಿಕ ಪ್ರಗತಿಯನ್ನು ಬಿಂಬಿಸುವಂತಃ ಒಂದು ಆನ್ ಲೈನ್ ತಂತ್ರಾಂಶವನ್ನು ಕೆ.ಎಂ.ಡಿ.ಎಸ್ ಸಹಯೋಗದೊಂದಿಗೆ ಅಭಿವೃದ್ಧಿ ಪಡಿಸುವುದು.

14/1/22

(ಎಸ್.ಮಹದೇವ)
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

14/01